**ಕರ್ನಾಟಕ ವಿಧಾನ ಸಭೆ**

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: | 1507 |
| ಸದಸ್ಯರ ಹೆಸರು : | ಶ್ರೀ ಎಂ.ಎಸ್.ಸೋಮಲಿಂಗಪ್ಪ (ಸಿರಗುಪ್ಪ) |
| ಉತ್ತರಿಸಬೇಕಾದ ದಿನಾಂಕ: | 17.12.2018. |
| ಉತ್ತರಿಸುವ ಸಚಿವರು : | ಗಣಿ ಮತ್ತು ಭೂವಿಜ್ಞಾನ ಹಾಗೂ ಮುಜರಾಯಿ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಬಳ್ಳಾರಿ ಜಿಲ್ಲೆ ಸಿರುಗುಪ್ಪ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ ವೇದಾವತಿ ಮತ್ತು ತುಂಗಭದ್ರ ನದಿಯಲ್ಲಿ ಅಕ್ರಮವಾಗಿ ಮರಳು ಸಾಗಾಣಿಕೆ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; | ಸರ್ಕಾರದ ಗಮನಕ್ಕೆ ಬಂದಿರುತ್ತದೆ. 2018-19 ನೇ ಸಾಲಿನ ನವಂಬರ್ ಅಂತ್ಯದವರೆಗೆ ಬಳ್ಳಾರಿ ಜಿಲ್ಲೆಯ ಸಿರುಗುಪ್ಪ ತಾಲ್ಲೂಕು ವ್ಯಾಪ್ತಿಯಲ್ಲಿ ಅನಧಿಕೃತ ಮರಳು ಸಾಗಾಣಿಕೆಯಡಿ ಒಟ್ಟು 64 ಪ್ರಕರಣಗಳನ್ನು ದಾಖಲಿಸಲಾಗಿರುತ್ತದೆ. ಪೋಲಿಸ್ ಠಾಣೆವಾರು ದಾಖಲಿಸಿದ ಮೊಕದ್ದಮೆ ವಿವರಗಳು ಈ ಕೆಳಕಂಡಂತಿರುತ್ತವೆ. |
| (ಆ) | ಬಂದಿದ್ದಲ್ಲಿ, ಅಕ್ರಮ ಮರಳು ಸಾಗಾಣಿಕೆದಾರರ ವಿರುದ್ಧ ಈವರೆಗೆ ಎಷ್ಟು ಪ್ರಕರಣಗಳು ದಾಖಲಾಗಿವೆ; (ಪೋಲಿಸ್ ಠಾಣೆವಾರು ಸಂಪೂರ್ಣ ವಿವರ ನೀಡುವುದು) | (ಕೆಳಗಿನ ಕೋಷ್ಟಕ ನೋಡಿ) |

| ಕ್ರ.ಸಂ | ಪೋಲೀಸ್ ಠಾಣೆಯ ಹೆಸರು | ಪ್ರಕರಣಗಳ ಸಂಖ್ಯೆ |
|---|---|---|
| 1 | ಸಿರಿಗೇರಿ | 18 |
| 2 | ತೆಕ್ಕಲಕೋಟೆ | 24 |
| 3 | ಸಿರುಗುಪ್ಪ | 13 |
| 4 | ಹಚ್ಚೋಳ್ಳಿ | 09 |
| | **ಒಟ್ಟು :** | **64** |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| (ಇ) | ಮರಳು ಸರಬರಾಜಿನಲ್ಲಿ ವ್ಯತ್ಯಯ-ವಾಗುತ್ತಿರುವುದರಿಂದ ಸಾರ್ವಜನಿಕರಿಗೆ ಹಾಗೂ ಸರ್ಕಾರಿ ಯೋಜನೆಗಳಿಗೆ ಅಡಚಣೆ ಉಂಟಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ ಇದನ್ನು ಸರಿಪಡಿಸಲು ಸರ್ಕಾರ ಯಾವ ಕ್ರಮಗಳನ್ನು ಕೈಗೊಂಡಿದೆ; | ಸರ್ಕಾರದ ಗಮನಕ್ಕೆ ಬಂದಿರುತ್ತದೆ. ಮರಳು ಪೂರೈಕೆಯಲ್ಲಿ ವ್ಯತ್ಯಯವಾಗುತ್ತಿರುವುದನ್ನು ಸರಿಪಡಿಸಲು ಸರ್ಕಾರವು ಕೆಳಕಂಡ ಕ್ರಮಗಳನ್ನು ಕೈಗೊಂಡಿರುತ್ತದೆ;<br>➢ ದಿನಾಂಕ:12.08.2016 ರಂದು ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಾವಳಿ 1994ರ ಕ್ಕೆ ತಿದ್ದುಪಡಿ ತಂದು ತಿದ್ದುಪಡಿ-2016 ರ ನಿಯಮಾವಳಿಗಳನ್ನು ಜಾರಿಗೆ ತಂದಿರುತ್ತದೆ.<br>➢ ಸದರಿ ತಿದ್ದುಪಡಿ ನಿಯಮಗಳಲ್ಲಿ ಮರಳು ಬ್ಲಾಕ್‌ಗಳನ್ನು ಗಣಿ ಮತ್ತು ಭೂವಿಜ್ಞಾನ ಇಲಾಖೆಯಿಂದ ಸಾರ್ವಜನಿಕ, ಟೆಂಡರ್-ಕಂ-ಹರಾಜು ಮೂಲಕ ವಿಲೇಪಡಿಸಲು, ಸರ್ಕಾರಿ ಕಾಮಗಾರಿಗಳಿಗೆ ಮೀಸಲಿರಿಸಲು, ಎಂ-ಸ್ಯಾಂಡ್ ಉತ್ಪಾದನೆಯನ್ನು ಉತ್ತೇಜಿಸಲು ಮತ್ತು ಪಟ್ಟಾ ಜಮೀನಿನಲ್ಲಿ ಮರಳು ಗಣಿಗಾರಿಕೆಗೆ ಅವಕಾಶ ಕಲ್ಪಿಸಲಾಗಿರುತ್ತದೆ.<br>➢ ಅದರಂತೆ, ಬಳ್ಳಾರಿ ಜಿಲ್ಲೆಯ, ಸಿರಗುಪ್ಪ ತಾಲ್ಲೂಕಿನ ಉಡೆಗೊಳಂ ನದಿ ಪಾತ್ರದಲ್ಲಿ 2 ಮರಳು ಬ್ಲಾಕ್‌ಗಳನ್ನು ಸಾರ್ವಜನಿಕ ಟೆಂಡರ್-ಕಂ-ಇ-ಹರಾಜು ಮೂಲಕ ದಿನಾಂಕ:10 & 12.04.2018 ರಂದು ಎರಡು ಮರಳು ಗಣಿ ಗುತ್ತಿಗೆಗಳನ್ನು ಮಂಜೂರು ಮಾಡಲಾಗಿದ್ದು, ಇಲ್ಲಿಯ ವರೆಗೆ **6.800** ಮೆ.ಟನ್ ಮರಳನ್ನು ಸಾರ್ವಜನಿಕ ಹಾಗೂ ಸರ್ಕಾರಿ ಕಾಮಗಾರಿಗಳಿಗೆ ಪೂರೈಸಲಾಗಿರುತ್ತದೆ.<br>➢ ಕರ್ನಾಟಕ ಉಪಖನಿಜ ರಿಯಾಯಿತಿ (ತಿದ್ದುಪಡಿ) ನಿಯಮಾವಳಿ-2016 ರ ನಿಯಮ 31-X ರಂತೆ ಒಂದು ಮರಳು ಬ್ಲಾಕ್ |

| | | ಲೋಕೋಪಯೋಗಿ ಇಲಾಖೆಯಿಂದ ಕಾರ್ಯನಿರ್ವಹಿಸುತ್ತಿದ್ದು, ಸದರಿ ಮರಳು ಬ್ಲಾಕ್‌ಗಳಿಂದ 2017–18 ನೇ ಸಾಲಿನಲ್ಲಿ **10,361** ಮೆ.ಟನ್‌ಗಳನ್ನು ಮರಳನ್ನು ಸಾರ್ವಜನಿಕ ಹಾಗೂ ಸರ್ಕಾರಿ ಕಾಮಗಾರಿಗಳಿಗೆ ಪೂರೈಸಲಾಗಿರುತ್ತದೆ.<br>➢ ಇದಲ್ಲದೇ ಪಕ್ಕದ ಜಿಲ್ಲೆಗಳಾದ ಕೊಪ್ಪಳ ಮತ್ತು ರಾಯಚೂರು ಜಿಲ್ಲೆಗಳಿಂದ ಬಳ್ಳಾರಿ ಜಿಲ್ಲೆಗೆ ಮರಳು ಸರಬರಾಜಾಗುತ್ತಿದೆ.<br>➢ ಮುಂದುವರೆದು ಬಳ್ಳಾರಿ ಜಿಲ್ಲೆಯ ಸಿರಗುಪ್ಪ ತಾಲ್ಲೂಕಿನ ತುಂಗಭದ್ರಾ ನದಿ ಪಾತ್ರದಲ್ಲಿ 14 ಮರಳು ಬ್ಲಾಕ್‌ಗಳನ್ನು ಗುರುತಿಸಲಾಗಿರುತ್ತದೆ. ಇವುಗಳ ಪೈಕಿ ಒಂದು ಮರಳು ಬ್ಲಾಕ್‌ನ್ನು ಸರ್ಕಾರಿ ಕಾಮಗಾರಿಗಳಿಗೆ ಮೀಸಲಾಗಿರುತ್ತದೆ. 13 ಮರಳು ಬ್ಲಾಕ್‌ಗಳನ್ನು ಟೆಂಡರ್–ಕಂ–ಇ–ಹರಾಜು ಪ್ರಕ್ರಿಯೆಗೆ ಒಳಪಡಿಸಲಾಗಿದ್ದು, ಟೆಂಡರ್ ಪ್ರಕ್ರಿಯೆ ಮುಗಿದ ನಂತರ ನಿಯಮಾನುಸಾರ ಮರಳು ಗುತ್ತಿಗೆಯನ್ನು ಮಂಜೂರು ಮಾಡಿ, ಸದರಿ ಮರಳು ಬ್ಲಾಕ್‌ಗಳಿಂದ ಸಾರ್ವಜನಿಕ ಹಾಗೂ ಸರ್ಕಾರಿ ಕಾಮಗಾರಿಗಳಿಗೆ ಮರಳು ಪೂರೈಕೆ ಮಾಡಲು ಕ್ರಮವಹಿಸಲಾಗುತ್ತದೆ. |
|---|---|---|
| (ಈ) | ಅಕ್ರಮ ಮರಳು ಸಾಗಾಣಿಕೆ ತಡೆಗಟ್ಟಲು ಇಲಾಖೆಯಿಂದ ಯಾರ್ಡ್ ನಿರ್ಮಾಣ ಮಾಡಲು ಕ್ರಮ ಕೈಗೊಳ್ಳಲಾಗುವುದೇ ? | ಅನಧಿಕೃತ ಮರಳು ಗಣಿಗಾರಿಕೆ, ದಾಸ್ತಾನು, ಸಾಗಾಣಿಕೆಯನ್ನು ತಡೆಗಟ್ಟಲು ಆಯಾ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಜಿಲ್ಲಾ ಮರಳು ಸಮಿತಿ ಹಾಗೂ ಉಪವಿಭಾಗಾಧಿಕಾರಿಗಳ ಅಧ್ಯಕ್ಷತೆಯಲ್ಲಿ ತಾಲ್ಲೂಕು ಮರಳು ಸಮಿತಿಯನ್ನು ರಚಿಸಲಾಗಿರುತ್ತದೆ.<br>ಮೇಲ್ಕಂಡ ಸಮಿತಿಯಲ್ಲಿ ಕಂದಾಯ, ಪೊಲೀಸ್, ಅರಣ್ಯ, ಲೋಕೋಪಯೋಗಿ, ಜಿಲ್ಲಾ ಪಂಚಾಯತ್, ಗಣಿ ಮತ್ತು ಭೂವಿಜ್ಞಾನ ಹಾಗೂ ಪ್ರಾದೇಶಿಕ ಸಾರಿಗೆ ಇಲಾಖೆ ಅಧಿಕಾರಿಗಳು ಸದಸ್ಯರುಗಳಾಗಿರುತ್ತಾರೆ. ಸದರಿ ಇಲಾಖೆಗಳ ಅಧಿಕಾರಿಗಳಿಗೆ ಅನಧಿಕೃತ ಮರಳು ಗಣಿಗಾರಿಕೆಯನ್ನು ತಡೆಯಲು ಗಣಿ ಮತ್ತು ಖನಿಜ(ಅಭಿವೃದ್ಧಿ ಮತ್ತು ನಿಯಂತ್ರಣ) ಕಾಯ್ದೆ 1957ರ ಕಲಂ 4(1), 4(1–A) ಮತ್ತು ಕಲಂ 21 ಮತ್ತು 22ರಡಿಯಲ್ಲಿ ಹಾಗೂ ಕರ್ನಾಟಕ ಉಪ ಖನಿಜ (ತಿದ್ದುಪಡಿ) ರಿಯಾಯಿತಿ ನಿಯಮಾವಳಿ 1994ರ ನಿಯಮ 31–Rರ ಉಪ ನಿಯಮ 13 ರಡಿಯಲ್ಲಿ ಸಂಬಂಧಪಟ್ಟ ಪೊಲೀಸ್ ಠಾಣೆಗಳಲ್ಲಿ ಹಾಗೂ ನ್ಯಾಯಾಲಯಗಳಲ್ಲಿ ಮೊಕದ್ದಮೆ ದಾಖಲಿಸಲು ಅಧಿಕಾರ ಪ್ರತ್ಯೋಜಿಸಲಾಗಿರುತ್ತದೆ.<br>ಅದರಂತೆ, ಬಳ್ಳಾರಿ ಜಿಲ್ಲೆಯ ಸಿರುಗುಪ್ಪ ತಾಲ್ಲೂಕು ವ್ಯಾಪ್ತಿಯಲ್ಲಿ ಅನಧಿಕೃತ ಮರಳು ಸಾಗಾಣಿಕೆಯಡಿ ಒಟ್ಟು 64 ಪ್ರಕರಣಗಳನ್ನು ದಾಖಲಿಸಲಾಗಿರುತ್ತದೆ.<br>ಮುಂದುವರೆದು, ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ–1994 ರ ನಿಯಮ 43 ರ ಉಪನಿಯಮ (5), (6), (7) & (8) ರಂತೆ ಖನಿಜ ಸಾಗಾಣಿಕೆ ಪರವಾನಿಗೆ ಇಲ್ಲದೆ ಅನಧಿಕೃತ ಉಪ ಖನಿಜ ಸಾಗಾಣಿಕೆ ಮಾಡುವ ವಾಹನಗಳನ್ನು ಜಪ್ತಿ ಪಡಿಸಿಕೊಂಡು ಮಾನ್ಯ ನ್ಯಾಯಾಲಯದಲ್ಲಿ ಸಂಬಂಧಪಟ್ಟವರ ವಿರುದ್ಧ ಮೊಕದ್ದಮೆ ದಾಖಲಿಸಲು ಅವಕಾಶವಿರುತ್ತದೆ.<br>ಈ ಸಂಬಂಧ, ಜಪ್ತಿಪಡಿಸಿಕೊಂಡ ಅನಧಿಕೃತ ಉಪಖನಿಜ ಸಾಗಾಣಿಕೆ ವಾಹನಗಳನ್ನು ನಿಲುಗಡೆ ಮಾಡಲು ಕಾರ್ಯಸಾಧುವಾದ |

| | |
|---|---|
| ಅ | ಪ್ರದೇಶವನ್ನು ಗುರುತಿಸುವುದು. ಸದರಿ ಪ್ರದೇಶದಲ್ಲಿ ವಾಹನಗಳ ಮತ್ತು ಉಪ ಖನಿಜದ ರಕ್ಷಣೆಯ ದೃಷ್ಟಿಯಿಂದ ಲೀಸ್ ಆಧಾರದ ಮೇರೆಗೆ ಪಡೆಯುವ ಜಾಗದಲ್ಲಿ ತಡೆಗೋಡೆ, ಸಿಸಿ ಟಿವಿ, ವೇಬ್ರಿಡ್ಜ್, ಗೃಹ ರಕ್ಷಕ ಸಿಬ್ಬಂದಿ ಇತ್ಯಾದಿ ಅಗತ್ಯ ಮೂಲಭೂತ ಸೌಕರ್ಯಗಳನ್ನು ಕಲ್ಪಿಸಿಕೊಳ್ಳುವುದರ ಕುರಿತು ಜಿಲ್ಲೆಯಲ್ಲಿ ಲಭ್ಯವಿರುವ ಸರ್ಕಾರಿ ಭೂಮಿಯನ್ನು ಲೀಸ್ ಆಧಾರದ ಮೇಲೆ ಪಡೆಯಲು ತಾಲ್ಲೂಕುವಾರು /ಹೋಬಳಿವಾರು ಸ್ಥಳ ಗುರುತಿಸುವ ಬಗ್ಗೆ ಕಂದಾಯ ಇಲಾಖೆಯ ಅಧಿಕಾರಿಗಳೊಂದಿಗೆ ಜಂಟಿಯಾಗಿ ಕ್ರಮ ಕೈಗೊಳ್ಳಲಾಗುತ್ತಿದೆ. |

ಸಂಖ್ಯೆ: ಸಿಐ 464 ಎಂಎಂಎನ್ 2018

**(ರಾಜಶೇಖರ ಬಿ. ಪಾಟೀಲ)**
ಗಣಿ ಮತ್ತು ಭೂವಿಜ್ಞಾನ ಹಾಗೂ
ಮುಜರಾಯಿ ಸಚಿವರು.

ಕರ್ನಾಟಕ ವಿಧಾನ ಸಭೆ

| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1514 |
|---|---|
| ಸದಸ್ಯರ ಹೆಸರು | ಶ್ರೀ ರಾಜಾ ವೆಂಕಟಪ್ಪ ನಾಯಕ್ (ಮಾನ್ವಿ) |
| ಉತ್ತರಿಸಬೇಕಾದ ದಿನಾಂಕ | 17-12-2018 |
| ಉತ್ತರಿಸುವ ಸಚಿವರು | ಗಣಿ ಮತ್ತು ಭೂವಿಜ್ಞಾನ ಮತ್ತು ಮುಜರಾಯಿ ಸಚಿವರು |

<table>
<tr><th>ಕ್ರ.ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ಕಳೆದ ಮೂರು ವರ್ಷಗಳಿಂದ ರಾಜ್ಯದ ಉಚ್ಚನ್ಯಾಯಾಲಯದಿಂದ ಉಪ ಖನಿಜವಾದ ಕಟ್ಟಡದ ಕಲ್ಲನ್ನು 04 ತಿಂಗಳ ಒಳಗೆ ಮಂಜೂರು ಮಾಡುವಂತೆ ಎಷ್ಟು ಪ್ರಕರಣಗಳಲ್ಲಿ ಆದೇಶ ನೀಡಲಾಗಿದೆ;</td><td>
ಕರ್ನಾಟಕ ಉಪಖನಿಜ ರಿಯಾಯಿತಿ (ತಿದ್ದುಪಡಿ) ನಿಯಮಾವಳಿಗಳು 2016ರಂತೆ, ಉಪಖನಿಜ ಗಣಿ ಗುತ್ತಿಗೆಗಳನ್ನು ಹರಾಜು ಮೂಲಕವೇ ಮಂಜೂರು ಮಾಡಬೇಕಾಗಿರುತ್ತದೆ. ನಿಯಮ 8B ಪ್ರಕಾರ ಕಲ್ಲು ಗಣಿಗುತ್ತಿಗೆ ಕೋರಿ ಬಾಕಿ ಇದ್ದ ಅರ್ಜಿಗಳು ಗುತ್ತಿಗೆ ಮಂಜೂರಾತಿಗೆ ಅನರ್ಹ ಅರ್ಜಿಗಳಾಗಿರುತ್ತವೆ. ಆದಾಗ್ಯೂ ನಿಯಮ 8B 2(d) & 2(d-1) ಮತ್ತು ನಿಯಮ-31ZD ರಂತೆ ತಿದ್ದುಪಡಿ-2016ರ ನಿಯಮ ಜಾರಿಯಾಗುವ ಪೂರ್ವದಲ್ಲಿ ಎಂ-ಸ್ಯಾಂಡ್ ತಯಾರಿಕೆ ಉದ್ದೇಶಕ್ಕಾಗಿ ಕಲ್ಲು ಗಣಿಗುತ್ತಿಗೆ ಕೋರಿ ಸಲ್ಲಿಸಿದ್ದ ಅರ್ಜಿಗಳಿಗೆ ದಿನಾಂಕ: 12-08-2016ರ ಪೂರ್ವದಲ್ಲಿ ಕಂದಾಯ ಮತ್ತು ಅರಣ್ಯ ಇಲಾಖೆ ನಿರಾಕ್ಷೇಪಣಾ ಪತ್ರ ಸ್ವೀಕರಿಸಿದ್ದಲ್ಲಿ ಅಂತಹ ಅರ್ಜಿಗಳು ಗುತ್ತಿಗೆ ಮಂಜೂರಾತಿಗೆ ಅರ್ಹ ಅರ್ಜಿಗಳಾಗಿರುತ್ತದೆ.
KMMCR-1994ರ ತಿದ್ದುಪಡಿ-2016ರ ನಿಯಮ 8B ರಂತೆ ಈ ನಿಯಮ ಜಾರಿ ಬರುವ ಪೂರ್ವದಲ್ಲಿ ಬಾಕಿ ಇದ್ದು, ಗುತ್ತಿಗೆ ಮಂಜೂರಾತಿಗೆ ಅನರ್ಹಗೊಂಡಿರುವ ಕಲ್ಲು ಗುತ್ತಿಗೆ ಅರ್ಜಿಗಳು ಮತ್ತು ಕಲ್ಲು ಗಣಿಗುತ್ತಿಗೆ ಮಂಜೂರು ಮಾಡಲು ಅರ್ಹವಿರುವ ಅರ್ಜಿಗಳ ವಿವರ ಕೆಳಕಂಡಂತಿದೆ.
<table>
<tr><th>ಉಪ ಖನಿಜದ ವಿವರ</th><th>ದಿ:12-08-2016ರ ಪೂರ್ವದಲ್ಲಿ ಕಲ್ಲು ಗಣಿಗುತ್ತಿಗೆ ಕೋರಿ ಬಾಕಿ ಇದ್ದ ಅರ್ಜಿಗಳು</th><th>ಅನರ್ಹಗೊಂಡಿರುವ ಅರ್ಜಿಗಳು</th><th>ತಿದ್ದುಪಡಿ-2016ರ ನಿಯಮಾವಳಿಯಂತೆ ಕಲ್ಲು ಗಣಿಗುತ್ತಿಗೆ ಮಂಜೂರಾತಿಗೆ ಅರ್ಹವಿರುವ ಅರ್ಜಿಗಳು</th><th>ಅರ್ಹ ಅರ್ಜಿಗಳ ಪೈಕಿ ವಿಲೇವಾರಿ ಮಾಡಿರುವ ಅರ್ಜಿಗಳ ಸಂಖ್ಯೆ</th></tr>
<tr><td>ನಿರ್ದಿಷ್ಟ ಉಪಖನಿಜ</td><td>1823</td><td>1714</td><td>109</td><td>16</td></tr>
<tr><td>ನಿರ್ದಿಷ್ಟವಲ್ಲದ ಉಪ ಖನಿಜ</td><td>5649</td><td>4845</td><td>804</td><td>236</td></tr>
<tr><td>ಎಂ-ಸ್ಯಾಂಡ್ ಕಲ್ಲುಗಣಿಗುತ್ತಿಗೆ ಕೋರಿರುವ ಅರ್ಜಿಗಳು</td><td>505</td><td>384</td><td>121</td><td>66</td></tr>
<tr><td>ಒಟ್ಟು</td><td>7977</td><td>6943</td><td>1034</td><td>318</td></tr>
</table>
ಕಲ್ಲುಗಣಿ ಗುತ್ತಿಗೆ ಅನರ್ಹಗೊಂಡಿರುವ ಅರ್ಜಿಗಳ ಅರ್ಜಿದಾರರು ಇಲಾಖೆಯಿಂದ ನೀಡಿರುವ ಹಿಂಬರಹದ ವಿರುದ್ಧ ಮಾನ್ಯ ಉಚ್ಚನ್ಯಾಯಾಲಯದಲ್ಲಿ ಸುಮಾರು 800ಕ್ಕೂ ಅಧಿಕ ರಿಟ್ ಅರ್ಜಿಗಳನ್ನು ದಾಖಲಿಸಿರುತ್ತಾರೆ.
ಮಾನ್ಯ ನ್ಯಾಯಾಲಯವು ಸದರಿ ರಿಟ್ ಅರ್ಜಿಗಳ ಆದೇಶದಲ್ಲಿ 02 ವಾರದೊಳಗಾಗಿ ಅವಶ್ಯಕ ನಿರಾಕ್ಷೇಪಣಾ ಪತ್ರ ಪಡೆದು 04 ವಾರದೊಳಗಾಗಿ ಕಲ್ಲುಗಣಿ ಗುತ್ತಿಗೆ ಕರಾರು ಅಮಲ್ಜಾರಿ ಮಾಡಲು ನಿರ್ದೇಶನವಿತ್ತಿರುತ್ತದೆ.
</td></tr>
</table>

| | | |
|---|---|---|
| ಆ) | ನ್ಯಾಯಾಲಯದ ಆದೇಶಗಳನ್ನು ಗಣಿ ಮತ್ತು ಭೂವಿಜ್ಞಾನ ಇಲಾಖೆ ಪಾಲನೆ ಮಾಡಿದೆಯೇ; | |
| ಇ) | ಇಲ್ಲದಿದ್ದಲ್ಲಿ, ಇಲಾಖೆಯು ನ್ಯಾಯಾಲಯದ ಆದೇಶವನ್ನು ಪಾಲನೆ ಮಾಡಲು ವಿಳಂಬ ಮಾಡುತ್ತಿರುವುದಕ್ಕೆ ಕಾರಣವೇನು; ಯಾವಾಗ ಆದೇಶವನ್ನು ಜಾರಿಗೊಳಿಸಲಾಗುವುದು? (ಸಂಪೂರ್ಣ ವಿವರ ನೀಡುವುದು) | [illegible] ಉಚ್ಚ ನ್ಯಾಯಾಲಯವು ರಿಟ್ ಅರ್ಜಿಯ ಆದೇಶಗಳಲ್ಲಿ ನಿರ್ದೇಶಿಸಿರುವಂತೆ ಕಲ್ಲುಗಣಿ ಗುತ್ತಿಗೆ [illegible]ರಾತಿಗೆ ಸಂಬಂಧಿಸಿದಂತೆ ಕಂದಾಯ ಮತ್ತು ಅರಣ್ಯ ಇಲಾಖೆ ನಿರಾಕ್ಷೇಪಣಾ ಪತ್ರ ಕೋರಲಾಗಿದ್ದು, ನಿರಾಕ್ಷೇಪಣಾ ಪತ್ರ ಸ್ವೀಕೃತವಾದ ನಂತರ ನಿಯಮಾನುಸಾರ ಕ್ರಮ ವಹಿಸಲಾಗುವುದು. |

ಸಂಖ್ಯೆ: ಸಿಐ 465 ಎಂಎಂಎನ್ 2018

(ರಾಜಶೇಖರ ಬಿ. ಪಾಟೀಲ)
ಗಣಿ ಮತ್ತು ಭೂವಿಜ್ಞಾನ ಹಾಗೂ
ಮುಜರಾಯಿ ಸಚಿವರು

ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: | 2046 |
| ಸದಸ್ಯರ ಹೆಸರು : | **ಶ್ರೀ ಸಿದ್ದು ಸವದಿ (ತೇರದಾಳ)** |
| ಉತ್ತರಿಸಬೇಕಾದ ದಿನಾಂಕ: | 17.12.2018. |
| ಉತ್ತರಿಸುವ ಸಚಿವರು : | ಗಣಿ ಮತ್ತು ಭೂವಿಜ್ಞಾನ ಹಾಗೂ ಮುಜರಾಯಿ ಸಚಿವರು |

| ಕ್ರ ಸಂ | ಪ್ರಶ್ನೆಗಳು | ಉತ್ತರ |
|---|---|---|
| ಅ. | ಸಾಮಾನ್ಯ ಜನರಿಗೆ ಮತ್ತು ಆಶ್ರಯ ಮನೆ ಕಟ್ಟಲಿಕ್ಕೆ ಮರಳಿಗೆ ಕೊರತೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಈ ಬಗ್ಗೆ ಯಾವ ಕ್ರಮಗಳನ್ನು ಕೈಗೊಳ್ಳಲಾಗಿದೆ (ಸಂಪೂರ್ಣ ಮಾಹಿತಿ ಒದಗಿಸುವುದು); | ಸರ್ಕಾರದ ಗಮನಕ್ಕೆ ಬಂದಿರುತ್ತದೆ. ಮರಳಿನ ಕೊರತೆಯನ್ನು ನಿಗಿಸಲು ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗಿದೆ;<br>• ದಿನಾಂಕ:12-08-2016 ರಂದು ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಾವಳಿ 1994 ಕ್ಕೆ ತಿದ್ದುಪಡಿ ತರಲಾಗಿದ್ದು, ಲೋಕೋಪಯೋಗಿ ಇಲಾಖೆಯಿಂದ ಮರಳು ಗಣಿಗಾರಿಕೆಯ ಜವಾಬ್ದಾರಿಯನ್ನು ಹಿಂಪಡೆದು ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಮುಖಾಂತರ ಸಾರ್ವಜನಿಕ ಟೆಂಡರ್-ಕಂ-ಇ-ಹರಾಜು ಮೂಲಕ 5 ವರ್ಷಗಳ ಅವಧಿಗೆ ಮರಳು ಬ್ಲಾಕ್‌ಗಳಿಗೆ ಗಣಿ ಗುತ್ತಿಗೆಗಳನ್ನು ನೀಡಲು ಅವಕಾಶ ಕಲ್ಪಿಸಲಾಗಿರುತ್ತದೆ.<br>• ನಿಯಮ 31-R ರ ಉಪ ನಿಯಮ 3(VIII) ರಂತೆ ಸರ್ಕಾರಿ ಕಾಮಗಾರಿಗಳಿಗೆ ಮರಳು ಬ್ಲಾಕ್‌ಗಳನ್ನು ಮೀಸಲಿರಿಸಲು ಅವಕಾಶ ಕಲ್ಪಿಸಲಾಗಿರುತ್ತದೆ.<br>• ಕರ್ನಾಟಕ ಉಪಖನಿಜ ರಿಯಾಯಿತಿ (ತಿದ್ದುಪಡಿ) ನಿಯಮಾವಳಿ 2016ರ ನಿಯಮ 31-X ರಂತೆ ಈಗಾಗಲೇ ಲೋಕೋಪಯೋಗಿ ಇಲಾಖೆಯಿಂದ ಟೆಂಡರ್ ನಡೆದು, ಕಾರ್ಯನಿರ್ವಹಿಸುತ್ತಿರುವ ಮರಳು ಬ್ಲಾಕ್‌ಗಳ ಅವಧಿಯು ಮುಗಿಯುವವರೆಗೂ ಸದರಿ ಮರಳು ಬ್ಲಾಕ್‌ಗಳಲ್ಲಿ ಲೋಕೋಪಯೋಗಿ ಇಲಾಖೆಯಿಂದಲೇ ಮರಳು ಗಣಿಗಾರಿಕೆ ನಡೆಸಲು ಅವಕಾಶ ಕಲ್ಪಿಸಿದೆ.<br>• ಪಟ್ಟಾ ಜಮೀನುಗಳಲ್ಲಿ ಮರಳು ಗಣಿಗಾರಿಕೆಗೆ ನಿಯಮ 31-ZA ರಂತೆ ಅವಕಾಶ ಕಲ್ಪಿಸಲಾಗಿರುತ್ತದೆ.<br>• ನಿಯಮ 31-ZB ರಂತೆ ಕರಾವಳಿ ಜಿಲ್ಲೆಗಳ ಕರಾವಳಿ ನದಿ ಪಾತ್ರದಲ್ಲಿ ಬರುವ ಮರಳು ದಿಬ್ಬಗಳಲ್ಲಿ ಸಾಂಪ್ರದಾಯಿಕ ಮರಳು ತೆಗೆಯುವವರಿಗೆ ದಿಬ್ಬಗಳಿಂದ ಮರಳನ್ನು ತೆರವುಗೊಳಿಸಲು ಅನುಮತಿ ನೀಡಲಾಗುತ್ತಿದೆ.<br>• ಕರ್ನಾಟಕ ಉಪಖನಿಜ ರಿಯಾಯಿತಿ (ತಿದ್ದುಪಡಿ) ನಿಯಮಾವಳಿ-2017 ರಂತೆ ಕರಾವಳಿ ಜಿಲ್ಲೆಗಳ Non CRZ ವ್ಯಾಪ್ತಿಯಲ್ಲಿ ಗುರುತಿಸಿರುವ ಮರಳು ಬ್ಲಾಕ್‌ಗಳನ್ನು ಸಂಬಂಧಪಟ್ಟ ತಾಲ್ಲೂಕು ಪಂಚಾಯಿತಿ ವ್ಯಾಪ್ತಿಯಲ್ಲಿ ವಾಸಿಸುತ್ತಿರುವ ಸಾಂಪ್ರದಾಯಿಕವಾಗಿ ಮಾನವ ಶ್ರಮದಿಂದ ಮರಳು ದಿಬ್ಬಗಳನ್ನು ತೆರವುಗೊಳಿಸುವ ವ್ಯಕ್ತಿಗಳಿಗೆ ಮಾತ್ರ ಇ-ಹರಾಜು ಮೂಲಕ ಮರಳು ಗಣಿ ಗುತ್ತಿಗೆ ನೀಡಲು ಅವಕಾಶ ಕಲ್ಪಿಸಲಾಗಿದೆ. |

| | | |
|---|---|---|
| | | • ರಾಜ್ಯದಲ್ಲಿ ನದಿ ಮರಳಿಗೆ ಪರ್ಯಾಯವಾಗಿ ಎಂ–ಸ್ಯಾಂಡ್ ಉತ್ಪಾದನೆಯನ್ನು ಹೆಚ್ಚು ಮಾಡಿ, ನದಿ ಮರಳಿನ ಸಮಸ್ಯೆಯನ್ನು ಸರಿದೂಗಿಸಲು, 31- ZC ರಂತೆ ಎಂ–ಸ್ಯಾಂಡ್ ಘಟಕ ಸ್ಥಾಪನೆಗೆ ಅವಕಾಶ ಕಲ್ಪಿಸಲಾಗಿದ್ದು, ಸರ್ಕಾರವು ಎಂ–ಸ್ಯಾಂಡ್ ಘಟಕ ನಡೆಸುವವರಿಗೆ ಈ ಕೆಳಕಂಡ ಸೌಲಭ್ಯಗಳನ್ನು ಜಾರಿಗೆ ತಂದಿರುತ್ತದೆ;<br>1. ರಾಜ್ಯದಲ್ಲಿ ಎಂ–ಸ್ಯಾಂಡ್ ಉತ್ಪಾದನೆಗಾಗಿ ರಾಜ್ಯ ಸರ್ಕಾರವು ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಾವಳಿ–1994ರ ನಿಯಮಗಳಿಗೆ ತಿದ್ದುಪಡಿ ತರಲಾಗಿದ್ದು, ಅದರಂತೆ ಎಂ–ಸ್ಯಾಂಡ್ ಘಟಕ ಸ್ಥಾಪಿಸುವವರಿಗೆ ಗರಿಷ್ಠ 30 ವರ್ಷದವರೆಗೆ 50–00 ಎಕರೆ ವಿಸ್ತೀರ್ಣದವರೆಗೂ ಕಲ್ಲುಗಣಿ ಗುತ್ತಿಗೆ ಮಂಜೂರು ಮಾಡಲು ಅವಕಾಶ ಕಲ್ಪಿಸಲಾಗಿದೆ.<br>2. ಪ್ರಸ್ತುತ ಚಾಲ್ತಿ ಕ್ರಷರ್ ಘಟಕದವರು ಎಂ–ಸ್ಯಾಂಡ್ ಘಟಕಕ್ಕೆ ಪರಿವರ್ತನೆಗೊಂಡು ಎಂ–ಸ್ಯಾಂಡ್ ಉತ್ಪಾದನೆ ಪ್ರಾರಂಭಿಸಿದಲ್ಲಿ ಸದರಿಯವರು ಹೊಂದಿರುವ ಕಲ್ಲುಗಣಿ ಗುತ್ತಿಗೆಗಳ ಅವಧಿಯನ್ನು 30 ವರ್ಷಗಳಿಗೆ ವಿಸ್ತರಿಸಲು ನಿಯಮಗಳಲ್ಲಿ ಅವಕಾಶ ಕಲ್ಪಿಸಲಾಗಿದೆ.<br>3. ಎಂ–ಸ್ಯಾಂಡ್ ಗುಣಮಟ್ಟವನ್ನು ಹೆಚ್ಚಿಸಲು ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾನಿಲಯ ಹಾಗೂ ಲೋಕೋಪಯೋಗಿ ಇಲಾಖೆಯೊಂದಿಗೆ ಒಡಂಬಡಿಕೆ ಮಾಡಿಕೊಂಡು ಮರಳಿನ ಗುಣಮಟ್ಟದ ವಿಶ್ಲೇಷಣಾ ವರದಿಯನ್ನು ಪಡೆಯಲಾಗುತ್ತಿದೆ.<br>4. ಎಂ–ಸ್ಯಾಂಡ್ ಬಳಕೆ ಕುರಿತು ಸಾರ್ವಜನಿಕರಲ್ಲಿ ಅರಿವು ಮೂಡಿಸಲು ಇಲಾಖೆಯಿಂದ ಆಕಾಶವಾಣಿ, ಬೆಂಗಳೂರು ರವರ ಮೂಲಕ ಜಿಂಗಲ್ಸ್‌ಗಳ ಪ್ರಸಾರ, ಸಂದರ್ಶನ ಕಾರ್ಯಕ್ರಮ, ಫೋನ್ ಇನ್ ಕಾರ್ಯಕ್ರಮಗಳನ್ನು ಆಯೋಜಿಸಲಾಗಿದೆ. ಇದಲ್ಲದೆ ಪೋಸ್ಟರ್ಸ್, ಕರಪತ್ರ, ಫ್ಲೆಕ್ಸ್‌ಗಳನ್ನು ಮುದ್ರಿಸಿ ಎಂ–ಸ್ಯಾಂಡ್ ಉಪಯೋಗಗಳ ಕುರಿತು ಸಾರ್ವಜನಿಕರಿಗೆ ಅರಿವು ಮೂಡಿಸುವ ಕಾರ್ಯಕ್ರಮ ಆಯೋಜಿಸಲಾಗಿರುತ್ತದೆ.<br>• ರಾಜ್ಯ ಸರ್ಕಾರವು ಮರಳಿನ ಕೊರತೆಯನ್ನು ಪೂರೈಸಲು ಹಾಗೂ ಕಡಿಮೆ ದರದಲ್ಲಿ ಸಾರ್ವಜನಿಕರಿಗೆ ಮರಳು ಲಭ್ಯವಾಗುವಂತೆ ಮಾಡಲು ವಿದೇಶದಿಂದ ಮರಳನ್ನು ಆಮದು ಮಾಡಿಕೊಳ್ಳಲು ನಿರ್ಧರಿಸಿ ದಿನಾಂಕ:16.11.2017 ರಂದು ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಾವಳಿ–1994 ತಿದ್ದುಪಡಿ ತಂದಿರುತ್ತದೆ. ತಿದ್ದುಪಡಿ ನಿಯಮ 31-ZF ಮತ್ತು 31-ZG ರಲ್ಲಿ ವಿದೇಶದಿಂದ ಆಮದು ಮಾಡಿಕೊಂಡ ಮರಳನ್ನು ಸಾರ್ವಜನಿಕರಿಗೆ ವಿತರಿಸಲು ಅವಕಾಶ ಕಲ್ಪಿಸಲಾಗಿದ್ದು ಅದರಂತೆ ಇಲಾಖೆಯಿಂದ ಕ್ರಮ ಕೈಗೊಳ್ಳಲಾಗಿದೆ. |
| ಆ. | ಮರಳು ವಿತರಣೆಯಲ್ಲಿ ಇರುವ ನಿಯಮಗಳಾವುವು; ಮರಳು ವಿತರಣೆಗೆ ಸಂಬಂಧಿಸಿದ ಇಲಾಖೆಗಳು ಯಾವುವು; ಮರಳು ವಿತರಣೆಗೆ ಇರುವ | ಕರ್ನಾಟಕ ಉಪಖನಿಜ ರಿಯಾಯಿತಿ (ತಿದ್ದುಪಡಿ) ನಿಯಮಾವಳಿ 2016 ರಂತೆ ಲೋಕೋಪಯೋಗಿ ಇಲಾಖೆಯಿಂದ ಮರಳು ಗಣಿಗಾರಿಕೆ ಜವಾಬ್ದಾರಿಯನ್ನು ಗಣಿ ಮತ್ತು ಭೂ ವಿಜ್ಞಾನ ಇಲಾಖೆಗೆ ವಾಪಸ್ಸು |

| | | |
|---|---|---|
| | ನಿಯಮಗಳೇನು (ಪೂರ್ಣ ಮಾಹಿತಿ ಒದಗಿಸುವುದು); | ಪಡೆಯಲಾಗಿರುತ್ತದೆ. ಸದರಿ ನಿಯಮಗಳಂತೆ ಟೆಂಡರ್-ಕಂ-ಇ-ಹರಾಜು ಮೂಲಕ, ಗುತ್ತಿಗೆ ಮಂಜೂರಾದ ಮರಳು ಬ್ಲಾಕ್‌ಗಳಲ್ಲಿ ಮರಳು ಗಣಿಗಾರಿಕೆ ನಡೆಸಿ, ಸ್ಟಾಕ್‌ಯಾರ್ಡ್‌ನಲ್ಲಿ ಸಂಗ್ರಹಿಸಿದ ಮರಳನ್ನು ಕೆ.ಎಂ.ಎಂ.ಸಿ.ಆರ್. ನಿಯಮ-42 ರಂತೆ ಇಲಾಖೆಯ ಐ.ಎಲ್.ಎಂ.ಎಸ್. ತಂತ್ರಾಂಶದ ಮೂಲಕ ವಿಶೇಷ ರಕ್ಷಣಾತ್ಮಕ ಹಾಳೆಗಳಲ್ಲಿ ಗುತ್ತಿಗೆದಾರರು ಎಂ.ಡಿ.ಪಿ. ಪಡೆದು, ಮರಳನ್ನು ಸಾಗಾಣಿಕೆ ಮಾಡಬೇಕಿರುತ್ತದೆ.<br>ಪ್ರಸ್ತುತ ಪಟ್ಟಾ ಜಮೀನಿನಲ್ಲಿ ಹಾಗೂ ಹರಾಜು ಮೂಲಕ ಮಂಜೂರಾದ ಮರಳು ಗುತ್ತಿಗೆ ಪ್ರದೇಶಗಳಲ್ಲಿ ಗಣಿ ಮತ್ತು ಭೂವಿಜ್ಞಾನ ಇಲಾಖೆಯಿಂದ ಮರಳು ಸಾಗಾಣಿಕೆ ಪರವಾನಿಗೆಗಳನ್ನು ವಿತರಿಸಲಾಗುವುದು.<br>ಕರ್ನಾಟಕ ಉಪಖನಿಜ ರಿಯಾಯಿತಿ (ತಿದ್ದುಪಡಿ) ನಿಯಮಾವಳಿ 2016 ರ ನಿಯಮ 31-X ರಂತೆ ಈ ಹಿಂದೆ ಲೋಕೋಪಯೋಗಿ ಇಲಾಖೆಯಿಂದ ಟೆಂಡರ್ ಆಗಿದ್ದ ಮರಳು ಬ್ಲಾಕ್‌ಗಳನ್ನು ಅವಧಿ ಪೂರ್ಣಗೊಳ್ಳುವವರೆಗೂ ಸದರಿ ಇಲಾಖೆಯ ವತಿಯಿಂದಲೇ ಗಣಿಗಾರಿಕೆ ನಡೆಸಿ, ಸ್ಟಾಕ್‌ಯಾರ್ಡ್‌ನಲ್ಲಿ ಸಂಗ್ರಹಿಸಲಾದ ಮರಳಿಗೆ ಪರವಾನಿಗೆಗಳನ್ನು ವಿತರಿಸಲಾಗುತ್ತದೆ.<br>ಸರ್ಕಾರವು ದಿನಾಂಕ:13.11.2016 ಮತ್ತು 14.11.2016 ರಂದು ನದಿ ಪಾತ್ರದ ಮರಳು ಬ್ಲಾಕ್‌ಗಳನ್ನು ಟೆಂಡರ್-ಕಂ-ಇ-ಹರಾಜು ಮೂಲಕ ವಿಲೇಪಡಿಸಲು ಸಂಬಂಧ ಮಾದರಿ ಟೆಂಡರ್ ಡಾಕ್ಯೂಮೆಂಟ್‌ನ್ನು ಹಾಗೂ ಪಟ್ಟಾ ಜಮೀನುಗಳಲ್ಲಿ ಮರಳು ಗಣಿಗಾರಿಕೆ ನಡೆಸುವ ಕುರಿತು ಮಾರ್ಗಸೂಚಿಯನ್ನು ಹೊರಡಿಸಿರುತ್ತದೆ. ಅದರಂತೆ ರಾಜ್ಯದಲ್ಲಿ ಮರಳು ಗಣಿಗುತ್ತಿಗೆ ನೀಡಲು ಕ್ರಮ ವಹಿಸಲಾಗುತ್ತದೆ. |
| ಇ. | ಮರಳು ಗಣಿಗಾರಿಕೆಗೆ ಇರುವ ನಿಯಮಗಳಾವುವು; ಈಗಿನ ನಿಯಮಾವಳಿಗಳಿಂದ ಸಾರ್ವಜನಿಕರಿಗೆ ತೊಂದರೆ ಆಗುತ್ತಿದ್ದು ಬದಲಾವಣೆ ಮಾಡುವ ಆಲೋಚನೆ ಇದೆಯೇ; | ➢ ಮರಳು ಗಣಿಗಾರಿಕೆಗೆ ಇರುವ ನಿಯಮಗಳು ಕೆಳಕಂಡಂತಿವೆ; ದಿನಾಂಕ:12-08-2016 ರಂದು ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಾವಳಿ 1994 ಕ್ಕೆ ತಿದ್ದುಪಡಿ ತರಲಾಗಿದ್ದು, ಲೋಕೋಪಯೋಗಿ ಇಲಾಖೆಯಿಂದ ಮರಳು ಗಣಿಗಾರಿಕೆಯ ಜವಾಬ್ದಾರಿಯನ್ನು ಹಿಂಪಡೆದು ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಮುಖಾಂತರ ಸಾರ್ವಜನಿಕ ಟೆಂಡರ್-ಕಂ-ಇ-ಹರಾಜು ಮೂಲಕ 5 ವರ್ಷಗಳ ಅವಧಿಗೆ ಮರಳು ಬ್ಲಾಕ್‌ಗಳಿಗೆ ಗಣಿಗುತ್ತಿಗೆಗಳನ್ನು ನೀಡಲು ಅವಕಾಶ ಕಲ್ಪಿಸಲಾಗಿರುತ್ತದೆ.<br>➢ ನಿಯಮ 31-S ರಂತೆ ಮರಳು ಗಣಿಗಾರಿಕೆಯಲ್ಲಿ ಗಣಿ ಗುತ್ತಿಗೆಗಳನ್ನು ನೀಡಲು ಮೀಸಲಾತಿಯನ್ನು ಕಲ್ಪಿಸಲಾಗಿದೆ.<br>➢ ಪಟ್ಟಾ ಜಮೀನುಗಳಲ್ಲಿ ಮರಳು ಗಣಿಗಾರಿಕೆಗೆ ನಿಯಮ 31-ZA ರಂತೆ ಅವಕಾಶ ಕಲ್ಪಿಸಲಾಗಿರುತ್ತದೆ.<br>➢ ನಿಯಮ 31-R ರ ಉಪ ನಿಯಮ 3(VIII) ರಂತೆ ಸರ್ಕಾರಿ ಕಾಮಗಾರಿಗಳಿಗೆ ಮರಳು ಬ್ಲಾಕ್‌ಗಳನ್ನು ಮೀಸಲಿರಿಸಲು ಅವಕಾಶ ಕಲ್ಪಿಸಲಾಗಿರುತ್ತದೆ.<br>➢ ನಿಯಮ 31-ZB ರಂತೆ ಕರಾವಳಿ ಜಿಲ್ಲೆಗಳ ಕರಾವಳಿ ನದಿ ಪಾತ್ರದಲ್ಲಿ ಬರುವ ಮರಳು ದಿಬ್ಬಗಳಲ್ಲಿ ಸಾಂಪ್ರದಾಯಿಕ ಮರಳು ತೆಗೆಯುವವರಿಗೆ ದಿಬ್ಬಗಳಿಂದ ಮರಳನ್ನು ತೆರವುಗೊಳಿಸಲು ಅನುಮತಿ ನೀಡಲಾಗುತ್ತಿದೆ. |

| | | |
|---|---|---|
| | | ➢ ಕರ್ನಾಟಕ ಉಪಖನಿಜ ರಿಯಾಯಿತಿ (ತಿದ್ದುಪಡಿ) ನಿಯಮಾವಳಿ-2017 ರಂತೆ ಕರಾವಳಿ ಜಿಲ್ಲೆಗಳ Non CRZ ವ್ಯಾಪ್ತಿಯಲ್ಲಿ ಗುರುತಿಸಿರುವ ಮರಳು ಬ್ಲಾಕ್‌ಗಳನ್ನು ಸಂಬಂಧಪಟ್ಟ ಗ್ರಾಮ ಪಂಚಾಯಿತಿ ವ್ಯಾಪ್ತಿಯಲ್ಲಿ ವಾಸಿಸುತ್ತಿರುವ ಸಾಂಪ್ರದಾಯಿಕವಾಗಿ ಮಾನವ ಶ್ರಮದಿಂದ ಮರಳು ದಿಬ್ಬಗಳನ್ನು ತೆರವುಗೊಳಿಸುವ ವ್ಯಕ್ತಿಗಳಿಗೆ ಮಾತ್ರ ಇ-ಹರಾಜು ಮೂಲಕ ಮರಳು ಗಣಿ ಗುತ್ತಿಗೆ ನೀಡಲು ಅವಕಾಶ ಕಲ್ಪಿಸಲಾಗಿದೆ.<br>➢ ರಾಜ್ಯದಲ್ಲಿ ನದಿ ಮರಳಿಗೆ ಪರ್ಯಾಯವಾಗಿ ಎಂ-ಸ್ಯಾಂಡ್ ಉತ್ಪಾದನೆಯನ್ನು ಹೆಚ್ಚು ಮಾಡಿ, ನದಿ ಮರಳಿನ ಸಮಸ್ಯೆಯನ್ನು ಸರಿದೂಗಿಸಲು, 31- ZC ರಂತೆ ಎಂ-ಸ್ಯಾಂಡ್ ಘಟಕ ಸ್ಥಾಪನೆಗೆ ಅವಕಾಶ ಕಲ್ಪಿಸಲಾಗಿರುತ್ತದೆ.<br><br>ಈಗಾಗಲೇ ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಾವಳಿ-1994 ಕ್ಕೆ ದಿನಾಂಕ: 12.08.2016 ರಂದು ನಿಯಮಗಳಲ್ಲಿ ತಿದ್ದುಪಡಿ ಬದಲಾವಣೆ ತಂದಿದ್ದರೂ ಸಹ ಪ್ರಸ್ತುತ ದಿನಗಳಲ್ಲಿ ರಾಜ್ಯಾದ್ಯಂತ ಇರುವ ಮರಳಿನ ಪೂರೈಕೆ ಸಮಗ್ರವಾಗಿ ಸಾರ್ವಜನಿಕರಿಗೆ ದೊರೆಯದಿರುವ ಕಾರಣ ಪ್ರಸ್ತುತ ಚಾಲ್ತಿಯಲ್ಲಿರುವ ನಿಯಮಗಳನ್ನು ಪರಿಶೀಲಿಸಿ ಸೂಕ್ತ ಬದಲಾವಣೆ ತರುವ ಸಂಬಂಧ ಸರ್ಕಾರವು ಸಚಿವ ಸಂಪುಟದ ಉಪಸಮಿತಿಯನ್ನು ರಚಿಸಲಾಗಿರುತ್ತದೆ.<br>ಸಚಿವ ಸಂಪುಟದ ಉಪ ಸಮಿತಿಯು ಮಾಡುವ ಶಿಫಾರಸ್ಸನ್ನು ನಿಯಮಾನುಸಾರ ಪರಿಶೀಲಿಸಿ, ಸರ್ಕಾರದಿಂದ ಸಾರ್ವಜನಿಕ ಪರವಾದ ನಿಯಮಗಳನ್ನು ಜಾರಿಗೆ ತರಲಾಗುವುದು. |
| ಈ. | ರೈತರ ಸ್ವಂತ ಜಮೀನಿನ ಹಳ್ಳದಲ್ಲೂ ಮರಳು ಪಡೆದುಕೊಳ್ಳಲು ಅವಕಾಶ ನೀಡದಿರುವುದರಿಂದ ರೈತರನ್ನು ಹೆದರಿಸಿ, ಅವರ ಮೇಲೆ ದಾವೆ ಹಾಕುತ್ತಿರುವುದು ರೈತ ವಿರೋಧಿ ನಿಲುವಲ್ಲವೇ? | ಕರ್ನಾಟಕ ಉಪಖನಿಜ ರಿಯಾಯಿತಿ (ತಿದ್ದುಪಡಿ) ನಿಯಮ ದಿನಾಂಕ: 12.08.2016 ರಂತೆ ನಿಯಮ 31-ZA ರಲ್ಲಿ ಪಟ್ಟಾ ಜಮೀನುಗಳಲ್ಲಿ ಮರಳು ಗಣಿಗಾರಿಕೆಗೆ ಅವಕಾಶ ಕಲ್ಪಿಸಲಾಗಿರುತ್ತದೆ.<br><br>ಕೆರೆ ಮತ್ತು ಹಳ್ಳಗಳಲ್ಲಿ ಲಭ್ಯವಿರುವ ಮರಳನ್ನು ಗಣಿಗಾರಿಕೆ ನಡೆಸಲು ಪ್ರಸ್ತುತ ಇರುವ ತಿದ್ದುಪಡಿ ನಿಯಮಗಳಲ್ಲಿ ಅವಕಾಶವಿರುವುದಿಲ್ಲ. ಮರಳಿನ ಕೊರತೆಯನ್ನು ನೀಗಿಸಲು ಕೆರೆ ಮತ್ತು ಹಳ್ಳಗಳಲ್ಲಿ ಲಭ್ಯವಿರುವ ಮರಳನ್ನು ಗಣಿಗಾರಿಕೆ ನಡೆಸಿ, ಸಾರ್ವಜನಿಕರಿಗೆ ಮರಳನ್ನು ಪೂರೈಸುವ ಸಂಬಂಧ ಈಗಾಗಲೇ ಸರ್ಕಾರವು ಸಚಿವ ಸಂಪುಟದ ಉಪಸಮಿತಿಯನ್ನು ರಚಿಸಿರುತ್ತದೆ. ಸಚಿವ ಸಂಪುಟದ ಉಪ ಸಮಿತಿಯು ಮಾಡುವ ಶಿಫಾರಸ್ಸನ್ನು ನಿಯಮಾನುಸಾರ ಪರಿಶೀಲಿಸಿ, ಕೆರೆ ಮತ್ತು ಹಳ್ಳಗಳಲ್ಲಿ ಇರುವ ಮರಳನ್ನು ಗಣಿಗಾರಿಕೆ ನಡೆಸುವ ಸಂಬಂಧ ಸೂಕ್ತ ಬದಲಾವಣೆಯನ್ನು ತರಲಾಗುವುದು. |

ಸಂಖ್ಯೆ: ಸಿಐ 469 ಎಂಎಂಎನ್ 2018

(ರಾಜಶೇಖರ ಬಿ. ಪಾಟೀಲ)
ಗಣಿ ಮತ್ತು ಭೂವಿಜ್ಞಾನ ಹಾಗೂ
ಮುಜರಾಯಿ ಸಚಿವರು.

# ಕರ್ನಾಟಕ ವಿಧಾನ ಸಭೆ

| | |
|---|---|
| 1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 2048 |
| 2. ಮಾನ್ಯ ಸದಸ್ಯರ ಹೆಸರು | ಶ್ರೀ ಸಿದ್ದು ಸವದಿ (ತೇರದಾಳ) |
| 3. ಉತ್ತರಿಸಬೇಕಾದ ದಿನಾಂಕ | 17/12/2018 |
| 4. ಉತ್ತರಿಸುವವರು | ಮಾನ್ಯ ಕಾರ್ಮಿಕ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಇರುವ ಕಾರ್ಮಿಕರ ಸಂಖ್ಯೆ ಎಷ್ಟು; ಅದರಲ್ಲಿ ನೋಂದಾಯಿತ ಕಾರ್ಮಿಕರ ಸಂಖ್ಯೆ ಎಷ್ಟು; ಇವುಗಳಲ್ಲಿ ಅಸಂಘಟಿತ ಕಾರ್ಮಿಕರು ಸೇರಿದ್ದಾರೆಯೇ; (ವಿಧಾನಸಭಾ ಕ್ಷೇತ್ರವಾರು ಮಾಹಿತಿ ನೀಡುವುದು) | ರಾಜ್ಯದಲ್ಲಿರುವ ಕಾರ್ಮಿಕರ ಸಂಖ್ಯೆಗೆ ಸಂಬಂಧಿಸಿದಂತೆ, ಕಾರ್ಮಿಕ ಇಲಾಖಾ ವತಿಯಿಂದ ಯಾವುದೇ ಸಮೀಕ್ಷೆ ನಡೆಸಿರುವುದಿಲ್ಲ. 2011ರಲ್ಲಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯು ಕೈಗೊಂಡ ಸಾಮಾಜಿಕ, ಆರ್ಥಿಕ ಮತ್ತು ಜಾತಿ ಜನಗಣತಿ ಪ್ರಕಾರ ರಾಜ್ಯದಲ್ಲಿ ಅಸಂಘಟಿತ ಕಾರ್ಮಿಕರ ಸಂಖ್ಯೆ 132 ಲಕ್ಷ ಎಂದು ತಿಳಿದು ಬಂದಿರುತ್ತದೆ. ಆದರೆ, ಇಲಾಖೆಯ ಅಧೀನದಲ್ಲಿ ಬರುವ ವಿವಿಧ ಮಂಡಳಿಗಳ ಮೂಲಕ ಸಂಘಟಿತ ಮತ್ತು ಅಸಂಘಟಿತ ಕಾರ್ಮಿಕರಿಗೆ ವಿವಿಧ ಯೋಜನೆಗಳಡಿ ಹಲವಾರು ಕಲ್ಯಾಣ ಮತ್ತು ಸಾಮಾಜಿಕ ಭದ್ರತಾ ಸೌಲಭ್ಯಗಳನ್ನು ನೀಡಲಾಗುತ್ತಿದ್ದು, ಸದರಿ ಯೋಜನೆಗಳಡಿ ಫಲಾನುಭವಿಗಳಾಗಿ ನೊಂದಾಯಿತರಾದ ಕಾರ್ಮಿಕರ ಸಂಖ್ಯೆ ಲಭ್ಯವಿದ್ದು, ಸದರಿ ಮಾಹಿತಿಯು ಕೆಳಕಂಡಂತಿರುತ್ತದೆ.<br>1. **ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ**<br>ಕರ್ನಾಟಕ ಕಾರ್ಮಿಕ ಕಲ್ಯಾಣ ನಿಧಿ ಕಾಯ್ದೆ, 1965 ಮತ್ತು ಕರ್ನಾಟಕ ಕಾರ್ಮಿಕ ಕಲ್ಯಾಣ ನಿಧಿ ನಿಯಮಾವಳಿ, 1968 ರನ್ವಯ 50 ಕ್ಕಿಂತ ಹೆಚ್ಚು ಕಾರ್ಮಿಕರನ್ನೊಳಗೊಂಡ ಕಾರ್ಖಾನೆಗಳು ಮತ್ತು ಸಂಸ್ಥೆಗಳ ಕಾರ್ಮಿಕರು ನಿಯಮಾನುಸಾರ ಮಂಡಳಿಗೆ ವಂತಿಕೆಯನ್ನು ಪಾವತಿಸಿ ಮಂಡಳಿಯ ಫಲಾನುಭವಿಗಳಾಗಿದ್ದು, ವಂತಿಕೆ ಪಾವತಿ ಮಾಡುವ ಒಟ್ಟು ಸಂಘಟಿತ ಕಾರ್ಮಿಕರ ಸಂಖ್ಯೆ 35.80 ಲಕ್ಷ ಇರುತ್ತದೆ. ಕಾರ್ಮಿಕರ ವಿಧಾನಸಭಾ ಕ್ಷೇತ್ರವಾರು ಮಾಹಿತಿ ಲಭ್ಯವಿರುವುದಿಲ್ಲ. ಆದರೆ ಜಿಲ್ಲಾವಾರು ಮಾಹಿತಿ ಲಭ್ಯವಿದ್ದು, ಸದರಿ ಮಾಹಿತಿಯನ್ನು **ಅನುಬಂಧ-1** ರಲ್ಲಿ ಒದಗಿಸಿದೆ.<br>2. **ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ:-**<br>ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರು ಅಸಂಘಟಿತ ವಲಯಕ್ಕೆ ಸೇರಿದ ಕಾರ್ಮಿಕರಾಗಿದ್ದು, ಇಲ್ಲಿಯವರೆಗೆ ಒಟ್ಟು 19,54,440 ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರನ್ನು ಮಂಡಳಿಯ ಫಲಾನುಭವಿಗಳಾಗಿ ನೋಂದಣಿ ಮಾಡಲಾಗಿರುತ್ತದೆ. ನೋಂದಣಿಯಾದ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಸಂಖ್ಯೆಗೆ ಸಂಬಂಧಿಸಿದ ತಾಲ್ಲೂಕು / ಕಾರ್ಮಿಕ ನಿರೀಕ್ಷಕರು / ಹಿರಿಯ ಕಾರ್ಮಿಕ ನಿರೀಕ್ಷಕವಾರು ವಿವರಗಳನ್ನು **ಅನುಬಂಧ-2** ರಲ್ಲಿ ಒದಗಿಸಿದೆ.<br>3. **ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ:-**<br>ಈ ಮಂಡಳಿಯಿಂದ ಅಸಂಘಟಿತ ಕಾರ್ಮಿಕರಿಗಾಗಿ ಜಾರಿಗೊಳಿಸುತ್ತಿರುವ ಸಾಮಾಜಿಕ ಭದ್ರತಾ ಯೋಜನೆಯಡಿಯಲ್ಲಿ ಅರ್ಹ ಕಾರ್ಮಿಕರನ್ನು ಫಲಾನುಭವಿಗಳಾಗಿ ಗುರುತಿಸಿ ನೋಂದಣಿ ಮಾಡಿಕೊಳ್ಳಲಾಗುತ್ತಿದ್ದು, ಅದರನ್ವಯ ಮಂಡಳಿಯಲ್ಲಿ ಕಾರ್ಮಿಕರ ಸಂಖ್ಯೆ ಲಭ್ಯವಿರುತ್ತದೆ. ಆದರೆ ತಾಲ್ಲೂಕುವಾರು ಮಾಹಿತಿ ಲಭ್ಯವಿರುವುದಿಲ್ಲ. ವಿವಿಧ ಯೋಜನೆಗಳಡಿ ಫಲಾನುಭವಿಗಳಾಗಿ ನೋಂದಣಿಯಾದ ಅಸಂಘಟಿತ ಕಾರ್ಮಿಕರ ವಿವರಗಳು ಈ ಕೆಳಕಂಡಂತಿದೆ.<br>● ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರ ಅಪಘಾತ |

| | | |
|---|---|---|
| | | ಪರಿಹಾರ ಯೋಜನೆಯಡಿ – ಒಟ್ಟು 07,78,485 ಕಾರ್ಮಿಕರು ನೋಂದಣಿಯಾಗಿರುತ್ತಾರೆ.<br>• ಎನ್.ಪಿ.ಎಸ್ ಲೈಟ್ ಸ್ವಾವಲಂಭನ್ (ಪಿಂಚಣಿ) ಯೋಜನೆಯಡಿ- 50,666, ಫಲಾನುಭವಿಗಳು ನೋಂದಣಿ ಯಾಗಿದ್ದು, ಜಿಲ್ಲಾವಾರು ವಿವರವನ್ನು **ಅನುಬಂಧ-3**ರಲ್ಲಿ ಒದಗಿಸಿದೆ. ಸದರಿ ಯೋಜನೆಯು 2015 ರಿಂದ ಸ್ಥಗಿತಗೊಂಡಿರುತ್ತದೆ. |
| ಆ) | ಯಾವ ಯಾವ ವಿಧದ ಕಾರ್ಮಿಕರನ್ನು ಇಲಾಖೆಯಿಂದ ನೋಂದಾಯಿಸಿಕೊಳ್ಳಲಾಗುವುದು; ನೇಕಾರಿಕೆ ಮಾಡುವ ಕಾರ್ಮಿಕರನ್ನು ನೋಂದಾಯಿಸಿಕೊಳ್ಳಬಹುದೆ; | ಕಾರ್ಮಿಕ ಇಲಾಖೆಯ ಅಧೀನದಲ್ಲಿ ಕಾರ್ಯನಿರ್ವಹಿಸುತ್ತಿರುವ ವಿವಿಧ ಮಂಡಳಿಗಳು ಜಾರಿಗೊಳಿಸುತ್ತಿರುವ ಯೋಜನೆಗಳಡಿ ಆಯಾ ಮಂಡಳಿಗಳಲ್ಲಿ ಫಲಾನುಭವಿಗಳಾಗಿ ಅರ್ಹ ಕಾರ್ಮಿಕರನ್ನು ನೋಂದಣಿ ಮಾಡಿ ಸದರಿ ಕಾರ್ಮಿಕರ ಕಲ್ಯಾಣ ಮತ್ತು ಸಾಮಾಜಿಕ ಭದ್ರತೆಗಾಗಿ ಹಲವಾರು ಯೋಜನೆಗಳನ್ನು ಜಾರಿಗೊಳಿಸಲಾಗುತ್ತಿದೆ.<br>ಎ) ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯಲ್ಲಿ ಹಿಂದಿನ 12 ತಿಂಗಳ ಅವಧಿಯಲ್ಲಿ 90 ದಿನಗಳು ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರಾಗಿ ಕೆಲಸ ಮಾಡಿದ ಕಾರ್ಮಿಕರನ್ನು ಫಲಾನುಭವಿಯಾಗಿ ನೋಂದಾಯಿಸಿಕೊಳ್ಳಲಾಗುವುದು.<br>ಬಿ) ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯಲ್ಲಿ ಈವರೆಗೆ ಒಟ್ಟು 43 ವಿವಿಧ ವರ್ಗಗಳ ಕಾರ್ಮಿಕರನ್ನು ಗುರುತಿಸಿದೆ. ಈ ಪಟ್ಟಿಯಲ್ಲಿ ನೇಕಾರರು ಸಹ ಸೇರಿರುತ್ತಾರೆ. ವಿವರ **ಅನುಭಂದ-4 ರಲ್ಲಿ** ಸಲ್ಲಿಸಿದೆ.<br>2017-18ನೇ ಸಾಲಿನ ಆಯವ್ಯಯದಲ್ಲಿ ಘೋಷಿಸಿದಂತೆ, ಅಸಂಘಟಿತ ವಲಯದ ಕಾರ್ಮಿಕರಾದ "ಹಮಾಲರು, ಮನೆಗೆಲಸದವರು, ಚಿಂದಿ ಆಯುವವರು, ಟೈಲರ್ಸ್ ಹಾಗೂ ಮೆಕ್ಯಾನಿಕ್" ಈ 05 ವರ್ಗಗಳ ಕಾರ್ಮಿಕರನ್ನು ನೋಂದಾಯಿಸಿ ಸ್ಮಾರ್ಟ್ ಕಾರ್ಡ್ ನೀಡುವ ಯೋಜನೆಯನ್ನು ಜಾರಿಗೊಳಿಸಲಾಗುತ್ತಿದ್ದು, ಇದರ ಜೊತೆಗೆ 2018-19ನೇ ಸಾಲಿನ ಆಯವ್ಯಯದಲ್ಲಿ ಘೋಷಿಸಿದಂತೆ "ಅಗಸರು, ಕ್ಷೌರಿಕರು, ಅಕ್ಕಸಾಲಿಗರು, ಕಮ್ಮಾರರು, ಕುಂಬಾರರು ಹಾಗೂ ಭಟ್ಟಿ ಕಾರ್ಮಿಕ" ಈ 06 ಅಸಂಘಟಿತ ಕಾರ್ಮಿಕರನ್ನು ಸಹ ನೋಂದಾಯಿಸಿ ಸ್ಮಾರ್ಟ್ ಕಾರ್ಡ್ ನೀಡಲು ಕ್ರಮ ಕೈಗೊಳ್ಳಲಾಗಿರುತ್ತದೆ.<br>ಪ್ರಸ್ತುತ ನೇಕಾರಿಕೆ ಕೆಲಸ ಮಾಡುವ ಕಾರ್ಮಿಕರನ್ನು ನೋಂದಾಯಿಸಿ ಸ್ಮಾರ್ಟ್ ನೀಡುವ ಯಾವುದೇ ಪ್ರಸ್ತಾವನೆ ಇರುವುದಿಲ್ಲ. |
| ಇ) | ನೋಂದಾಯಿತ ಕಾರ್ಮಿಕರಿಗೆ ಸಿಗುವ ಸೌಲಭ್ಯಗಳು ಯಾವುವು; ನೋಂದಾಯಿಸಿಕೊಳ್ಳದೇ ಇರುವ ಕಾರ್ಮಿಕರ ಸಂಖ್ಯೆ ಎಷ್ಟು; ಅವರನ್ನು ಯಾವ ರೀತಿ ನೋಂದಾಯಿಸಿಕೊಳ್ಳಲಾಗುವುದು; ಅಲ್ಲಿಯವರೆಗೆ ಅವರಿಗೆ ಸಿಗುವ ಸೌಲಭ್ಯಗಳಾವುವು? (ವಿವರ ಒದಗಿಸುವುದು) | ಇಲಾಖೆಯ ಅಧೀನದಲ್ಲಿ ಬರುವ ಮಂಡಳಿಗಳ ಮೂಲಕ ಜಾರಿಗೊಳಿಸುತ್ತಿರುವ ಯೋಜನೆಗಳಡಿ ನಿಯಮಾನುಸಾರ ಅರ್ಹ ಕಾರ್ಮಿಕರನ್ನು ಫಲಾನುಭವಿಗಳಾಗಿ ನೋಂದಾಯಿಸಿ ಸೌಲಭ್ಯಗಳನ್ನು ನೀಡಲಾಗುತ್ತಿದ್ದು, ಫಲಾನುಭವಿಯಾಗಿ ನೋಂದಣಿಯಾಗದ ಕಾರ್ಮಿಕರಿಗೆ ಯಾವುದೇ ಸೌಲಭ್ಯ ಲಭ್ಯವಾಗುವುದಿಲ್ಲ. ಅಲ್ಲದೇ ಫಲಾನುಭವಿಯಾಗಿ ಅರ್ಹತೆಯುಳ್ಳ ಕಾರ್ಮಿಕರನ್ನು ಗುರುತಿಸಿ ನೋಂದಾಯಿಸುವ ಪ್ರಕ್ರಿಯೆ ಸಹ ನಡೆಯುತ್ತಿದ್ದು, ಪ್ರಸ್ತುತ ನೋಂದಾಯಿತ ಕಾರ್ಮಿಕರಿಗೆ ಮಂಡಳಿಗಳಿಂದ ದೊರೆಯುವ ಸೌಲಭ್ಯಗಳ ವಿವರ ಈ ಕೆಳಕಂಡಂತಿವೆ.<br>1. **<u>ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ</u>**<br>ಈ ಮಂಡಳಿ ವತಿಯಿಂದ ಸಂಘಟಿತ ಕಾರ್ಮಿಕರಿಗೆ ಈ ಕೆಳಕಂಡ ಪ್ರಮುಖ ಸೌಲಭ್ಯಗಳನ್ನು ನೀಡಲಾಗುತ್ತಿದೆ.<br>➢ ಸಂಘಟಿತ ಕಾರ್ಮಿಕರ ಮಕ್ಕಳಿಗೆ ಶೈಕ್ಷಣಿಕ ಪ್ರೋತ್ಸಾಹ ಧನ ಸಹಾಯ.<br>➢ ಸಂಘಟಿತ ಕಾರ್ಮಿಕರಿಗೆ ವೈದ್ಯಕೀಯ ನೆರವು.<br>➢ ಮೃತ ಕಾರ್ಮಿಕನ ಅಂತ್ಯಸಂಸ್ಕಾರಕ್ಕೆ ಧನ ಸಹಾಯ.<br>➢ ಕಾರ್ಮಿಕರ ಅಪಘಾತ ಧನ ಸಹಾಯ.<br>➢ ವಾರ್ಷಿಕ ಕ್ರೀಡಾ ಚಟುವಟಿಕೆ ಹಮ್ಮಿಕೊಳ್ಳುವ ನೋಂದಾಯಿತ ಕಾರ್ಮಿಕ ಸಂಘಗಳಿಗೆ ಧನ ಸಹಾಯ. |

| | | |
|---|---|---|
| | | ➢ ವಾರ್ಷಿಕ ವೈದ್ಯಕೀಯ ತಪಾಸಣೆಗಳನ್ನು ನಡೆಸುವ ಕಾರ್ಮಿಕ ಸಂಘಗಳಿಗೆ ಧನ ಸಹಾಯ.<br>➢ ಕಾರ್ಮಿಕರ ಶುಭ ಸಮಾರಂಭಗಳಿಗೆ ರಿಯಾಯಿತಿ ದರದಲ್ಲಿ ಸಮುದಾಯ ಭವನವನ್ನು ಬಾಡಿಗೆಗೆ ನೀಡಲಾಗುತ್ತಿದೆ.<br><br>2. **ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ**<br>ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯಲ್ಲಿ ನೋಂದಾಯಿತರಾದ ಫಲಾನುಭವಿಗಳಿಗೆ 15 ರೀತಿಯ ಯೋಜನೆಗಳನ್ನು ರೂಪಿಸಲಾಗಿದ್ದು, ಕಲ್ಯಾಣ ಮತ್ತು ಸಾಮಾಜಿಕ ಭದ್ರತಾ ಆರ್ಥಿಕ ಸೌಲಭ್ಯಗಳನ್ನು ನೀಡಲಾಗುತ್ತಿದೆ. ಅವುಗಳ ವಿವರವನ್ನು **ಅನುಬಂಧ-5** ರಲ್ಲಿ ಒದಗಿಸಿದೆ.<br><br>3. **ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ**<br>ಈ ಮಂಡಳಿಯು ಅಸಂಘಟಿತ ವಲಯದ ಕಾರ್ಮಿಕರಿಗೆ ನಿರೂಪಿತವಾದ ಶಾಸನಬದ್ಧ ಮಂಡಳಿಯಾಗಿದ್ದು, ಈ ಕೆಳಕಂಡ ಸಾಮಾಜಿಕ ಭದ್ರತಾ ಯೋಜನೆಗಳನ್ನು ಜಾರಿಗೊಳಿಸುತ್ತಿದೆ.<br><br>**ಅ) ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರ ಅಪಘಾತ ಪರಿಹಾರ ಯೋಜನೆ** :-<br>ಅಸಂಘಟಿತ ವಲಯದ ಕಾರ್ಮಿಕರೆಂದು ಗುರುತಿಸಲ್ಪಟ್ಟ ಖಾಸಗಿ ವಾಣಿಜ್ಯ ಸಾರಿಗೆ ವಾಹನ ಕಾರ್ಮಿಕರಾದ ಚಾಲಕರು, ನಿರ್ವಾಹಕರು ಹಾಗೂ ಕ್ಲೀನರ್‌ಗಳಿಗೆ ಅಪಘಾತ ಪರಿಹಾರ ಸೌಲಭ್ಯ ಒದಗಿಸುವ ಯೋಜನೆಯನ್ನು 2012-13ನೇ ಸಾಲಿನಿಂದ ಜಾರಿಗೊಳಿಸಲಾಗುತ್ತಿದೆ. ಈ ಯೋಜನೆಯಡಿ ದೊರೆಯುವ ಸೌಲಭ್ಯಗಳು ಈ ಕೆಳಗಿನಂತಿವೆ:-<br>• ಅಪಘಾತದಿಂದ ಚಾಲಕರು, ನಿರ್ವಾಹಕರು ಹಾಗೂ ಕ್ಲೀನರ್‌ಗಳು ಮರಣ ಹೊಂದಿದಲ್ಲಿ, ಅವರ ನಾಮ ನಿರ್ದೇಶಿತರಿಗೆ ರೂ.5.00 ಲಕ್ಷ ಪರಿಹಾರ.<br>• ಅಪಘಾತದಿಂದ ಶಾಶ್ವತ ದುರ್ಬಲತೆ ಹೊಂದಿದಾಗ, ಫಲಾನುಭವಿಗೆ ದುರ್ಬಲತೆಯ ಪ್ರಮಾಣಕ್ಕನುಗುಣವಾಗಿ ರೂ.2.00 ಲಕ್ಷದವರೆಗೆ ಪರಿಹಾರ.<br>• ಅಪಘಾತದಿಂದ ತಾತ್ಕಾಲಿಕ ದುರ್ಬಲತೆ ಹೊಂದಿದಾಗ, ಫಲಾನುಭವಿಗೆ ಗರಿಷ್ಠ ರೂ.1.00 ಲಕ್ಷ ರೂ. ಗಳವರೆಗೆ ವೈದ್ಯಕೀಯ ವೆಚ್ಚದ ಮರುಪಾವತಿ.<br><br>**ಆ) ಅಪಘಾತ ಜೀವರಕ್ಷಕ ಯೋಜನೆ :**<br>ನೋಂದಾಯಿತ ಖಾಸಗಿ ವಾಣಿಜ್ಯ ಸಾರಿಗೆ ಚಾಲಕರಿಗೆ ಪ್ರಥಮ ಚಿಕಿತ್ಸಾ ತರಬೇತಿ ನೀಡಿ, ಅಪಘಾತದ ಗಾಯಾಳುಗಳನ್ನು ರಕ್ಷಿಸುವ "ಅಪಘಾತ ಜೀವ ರಕ್ಷಕ" ಸ್ವಯಂ ಸೇವಕರನ್ನು ಸಜ್ಜುಗೊಳಿಸುವ ಯೋಜನೆಯನ್ನು 2016-17ನೇ ಸಾಲಿನಿಂದ ಜಾರಿಗೊಳಿಸುತ್ತಿದೆ. ಈ ಯೋಜನೆಯಡಿ ತರಬೇತಿ ಪಡೆದ ಫಲಾನುಭವಿಗಳಿಗೆ ಸುಸಜ್ಜಿತ ಪ್ರಥಮ ಚಿಕಿತ್ಸಾ ಕಿಟ್ ಹಾಗೂ ತರಬೇತಿ ಪ್ರಮಾಣ ಪತ್ರ ನೀಡಲಾಗುತ್ತಿದೆ. ಅಪಘಾತವಾದ ಗಾಯಾಳುಗಳಿಗೆ ಪ್ರಥಮ ಚಿಕಿತ್ಸೆ ನೀಡಿ ಹತ್ತಿರದ ಆಸ್ಪತ್ರೆಗೆ ದಾಖಲಿಸಿ ಸಂಬಂಧಪಟ್ಟ ಪೋಲೀಸ್ ಠಾಣೆಗೆ ಮಾಹಿತಿ ನೀಡಿದ ಅಪಘಾತ ಜೀವರಕ್ಷಕರಿಗೆ ಮಂಡಳಿಯಿಂದ ರೂ. 1,000/- ಗಳ ಪ್ರೋತ್ಸಾಹಧನ ನೀಡಲಾಗುತ್ತಿದೆ.<br><br>**ಇ) ಅಂಬೇಡ್ಕರ್ ಕಾರ್ಮಿಕ ಸಹಾಯ ಹಸ್ತ ಯೋಜನೆ:-** |

| | | |
|---|---|---|
| | | ಈ ಯೋಜನೆಯಡಿ ಅಸಂಘಟಿತ ವಲಯದ 5 ವರ್ಗಗಳ ಕಾರ್ಮಿಕರಾದ ಚಿಂದಿ ಆಯುವವರು, ಗೃಹ ಕಾರ್ಮಿಕರು, ಹಮಾಲಿಗಳು, ಟೈಲರ್‌ಗಳು ಹಾಗೂ ಮೆಕ್ಯಾನಿಕ್‌ಗಳನ್ನು ನೊಂದಾಯಿಸಿ ಸ್ಮಾಟ್ ಕಾರ್ಡ್ ನೀಡಲಾಗುತ್ತಿದೆ, ಅಸಂಘಟಿತ ವಲಯದ ಗುರುತಿಸಲಾದ ನೋಂದಾಯಿತ ಕಾರ್ಮಿಕರಿಗೆ ಭವಿಷ್ಯನಿಧಿ ಯೋಜನೆ ಜಾರಿಗೊಳಿಸುವ ಪ್ರಸ್ತಾವನೆಯು ಸರ್ಕಾರದ ಪರಿಶೀಲನೆಯಲ್ಲಿದೆ.<br><br>ನೋಂದಾಯಿಸಿಕೊಳ್ಳದೇ ಇರುವ ಅಸಂಘಟಿತ ಕಾರ್ಮಿಕರ ಅಂಕಿ ಸಂಖ್ಯೆಗಳ ಮಾಹಿತಿ ಇಲಾಖೆಯಲ್ಲಿ ಲಭ್ಯವಿರುವುದಿಲ್ಲ.<br><br>ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ ವತಿಯಿಂದ ಅರ್ಹ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರನ್ನು ಗುರುತಿಸಿ ಅವರನ್ನು ಮಂಡಳಿಯಲ್ಲಿ ನೋಂದಾಯಿಸುವ ಪ್ರಕ್ರಿಯೆ ನಿರಂತರವಾಗಿ ನಡೆಯುತ್ತಿದೆ. ಅಲ್ಲದೆ ಕಟ್ಟಡ ಕಾಮಗಾರಿಗಳ ಸ್ಥಳಕ್ಕೆ ಭೇಟಿ ನೀಡಿ ಕಾರ್ಮಿಕರನ್ನು ನೋಂದಾಯಿಸಿಕೊಂಡು, ನಂತರ ರಾಜ್ಯದ ಎಲ್ಲಾ ಹಿರಿಯ/ಕಾರ್ಮಿಕ ನಿರೀಕ್ಷಕರುಗಳು ಆನ್‌ಲೈನ್ ಮುಖೇನ ನೊಂದಣಿ ಕಾರ್ಯ ಮಾಡುತ್ತಾರೆ. ಮುಂದುವರೆದು, ಗ್ರಾಮೀಣ ಪ್ರದೇಶದಲ್ಲಿ ಕಟ್ಟಡ ಅಥವಾ ಇತರೆ ನಿರ್ಮಾಣ ಕೆಲಸಗಳನ್ನು ನಿರ್ವಹಿಸುವ ಕಾರ್ಮಿಕರುಗಳನ್ನು ಮಂಡಳಿಯ ಫಲಾನುಭವಿಗಳನ್ನಾಗಿ ನೋಂದಾಯಿಸುವ ವಿಶೇಷ ನೋಂದಣಿ ಅಭಿಯಾನದ ಜವಾಬ್ದಾರಿಯನ್ನು ಸರ್ಕಾರಿ ಸ್ವಾಮ್ಯದ ಸಂಸ್ಥೆಯಾದ ಮೆ॥ ಕಿಯೋನಿಕ್ಸ್ ಸಂಸ್ಥೆಗೆ ವಹಿಸಲಾಗಿರುತ್ತದೆ. ಈ ಸಂಸ್ಥೆಯ ಮೂಲಕ ರಾಜ್ಯದ್ಯಾಂತ ವಿವಿಧ ಇಲಾಖೆಗಳ ಅಧಿಕಾರಿಗಳ ಸಹಯೋಗದೊಂದಿಗೆ ಕಾರ್ಮಿಕರನ್ನು ನೋಂದಣಿ ಮಾಡಿ ಸ್ಮಾರ್ಟ್ ಕಾರ್ಡ್‌ಗಳನ್ನು ವಿತರಿಸುವ ಅಭಿಯಾನ ಪ್ರಗತಿಯಲ್ಲಿದೆ. |

ಸಂಖ್ಯೆ: ಕಾಇ 438 ಎಲ್‌ಇಟಿ 2018

(ವೆಂಕಟರಮಣಪ್ಪ)
ಕಾರ್ಮಿಕ ಸಚಿವರು

ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಸಿದ್ದು ಸವದಿ (ತೇರದಾಳ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2048ಕ್ಕೆ

ಅನುಬಂಧ-1

ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿಯಲ್ಲಿ ವಂತಿಗೆ ಪಾವತಿಸಿರುವ
ಸಂಘಟಿತ ಕಾರ್ಮಿಕರ ವಿವರ

| ಕ್ರಸಂ | ಜಿಲ್ಲೆ | ಕಾರ್ಮಿಕರ ಸಂಖ್ಯೆ |
|---|---|---|
| 1 | ಬೆಂಗಳೂರು ನಗರ | 3048995 |
| 2 | ಬೆಂಗಳೂರು ಗ್ರಾಮಾಂತರ | 61774 |
| 3 | ಬೆಳಗಾವಿ | 30000 |
| 4 | ಬಳ್ಳಾರಿ | 25000 |
| 5 | ಬೀದರ | 4409 |
| 6 | ಬಾಗಲಕೋಟೆ | 11641 |
| 7 | ವಿಜಯಪುರ | 4146 |
| 8 | ಚಿಕ್ಕಮಗಳೂರು | 12481 |
| 9 | ಚಾಮರಾಜನಗರ | 4263 |
| 10 | ಚಿತ್ರದುರ್ಗ | 3166 |
| 11 | ಚಿಕ್ಕಬಳ್ಳಾಪುರ | 7204 |
| 12 | ದಾವಣಗೆರೆ | 9161 |
| 13 | ದಕ್ಷಿಣ ಕನ್ನಡ | 68191 |
| 14 | ಧಾರವಾಡ | 25118 |
| 15 | ಗದಗ | 4401 |
| 16 | ಕಲಬುರ್ಗಿ | 4252 |
| 17 | ಹಾವೇರಿ | 7281 |
| 18 | ಹಾಸನ | 15266 |
| 19 | ಕೊಡಗು | 9700 |
| 20 | ಕೋಲಾರ | 15246 |
| 21 | ಕೊಪ್ಪಳ | 6063 |
| 22 | ಮೈಸೂರು | 50864 |
| 23 | ಮಂಡ್ಯ | 16280 |
| 24 | ರಾಮನಗರ | 32010 |
| 25 | ರಾಯಚೂರು | 6912 |
| 26 | ಶಿವಮೊಗ್ಗ | 25620 |
| 27 | ತುಮಕೂರು | 29647 |
| 28 | ಉಡುಪಿ | 23914 |
| 29 | ಉತ್ತರ ಕನ್ನಡ | 16776 |
| 30 | ಯಾದಗಿರಿ | 789 |
| | ಒಟ್ಟು | 3580000 |

(ಪ್ರಶ್ನೆ ಸಂಖ್ಯೆ: 2048 ರ ಅನುಬಂಧ



ಅನುಬಂಧ–2

ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯಲ್ಲಿ ನೋಂದಣಿಯಾಗಿರುವ ತಾಲ್ಲೂಕುವಾರು/ವೃತ್ತವಾರು ಫಲಾನುಭವಿಗಳ ವಿವರ

| Districts | | Labour Officers | | Senior/ Labour Inspector | | No. of beneficiaries registered untill November 2018 |
|---|---|---|---|---|---|---|
| | | | | | | **Total** |
| 1 | Bengaluru | 1 | Labour Officer-1 | 1 | Senior Labour Inspector, 1stCircle | 4245 |
| | | | | 2 | Senior Labour Inspector, 2nd Circle | 3963 |
| | | | | 3 | Senior Labour Inspector, 10thCircle | 3599 |
| | | | | 4 | Senior Labour Inspector, 25stCircle | 4112 |
| | | | | 5 | Senior Labour Inspector, 27stCircle | 4125 |
| | | | | 6 | Senior Labour Inspector, 30stCircle | 4620 |
| | | | | 7 | Senior Labour Inspector, 45stCircle | 4245 |
| | | | | 8 | Senior Labour Inspector, 47stCircle | 3634 |
| | | | | 9 | Labour Inspector, Nelamangala Circle | 3937 |
| | | | | | | **36480** |
| | | 2 | Labour Officer-2 | 1 | Senior Labour Inspector, 12thCircle | 4841 |
| | | | | 2 | Senior Labour Inspector, 13thCircle | 3828 |
| | | | | 3 | Senior Labour Inspector, 26th Circle | 4158 |
| | | | | 4 | Senior Labour Inspector, 28nd Circle | 11463 |
| | | | | 5 | Senior Labour Inspector, 33rd Circle | 2715 |
| | | | | 6 | Senior Labour Inspector, 34th Circle | 3133 |
| | | | | 7 | Senior Labour Inspector, 39th Circle | 8531 |
| | | | | 8 | Senior Labour Inspector, 48th Circle | 10296 |
| | | | | 9 | Senior Labour Inspector, 49th Circle | 2907 |
| | | | | | | **51872** |
| | | 3 | Labour Officer-3 | 1 | Senior Labour Inspector, 5th Circle | 25519 |
| | | | | 2 | Senior Labour Inspector, 15th Circle | 18027 |
| | | | | 3 | Senior Labour Inspector, 23rd Circle | 2835 |
| | | | | 4 | Senior Labour Inspector, 29th Circle | 4904 |
| | | | | 5 | Senior Labour Inspector, 36th Circle | 5866 |
| | | | | 6 | Senior Labour Inspector, 42nd Circle | 3651 |
| | | | | 7 | Senior Labour Inspector, 43rd Circle | 1273 |
| | | | | 8 | Senior Labour Inspector, 44th Circle | 16504 |
| | | | | 9 | Senior Labour Inspector, 46th Circle | 7427 |
| | | | | 10 | Labour Inspector, Devanahalli Circle | 9344 |
| | | | | | | **95350** |
| | | 4 | Labour Officer-4 | 1 | Senior Labour Inspector, 4th Circle | 1690 |
| | | | | 2 | Senior Labour Inspector, 8th Circle | 3008 |
| | | | | 3 | Senior Labour Inspector, 19th Circle | 5283 |
| | | | | 4 | Senior Labour Inspector, 21st Circle | 4968 |
| | | | | 5 | Senior Labour Inspector, 22nd Circle | 5077 |
| | | | | 6 | Senior Labour Inspector, 32nd Circle | 6101 |
| | | | | 7 | Senior Labour Inspector, 37th Circle | 4828 |
| | | | | 8 | Senior Labour Inspector, 41st Circle | 4667 |
| | | | | 9 | Labour Inspector, HoskoteCircle | 9529 |
| | | | | | | **45151** |
| | | 5 | Labour Officer-5 | 1 | Senior Labour Inspector, 3rd Circle | 4347 |
| | | | | 2 | Senior Labour Inspector, 6th Circle | 2416 |
| | | | | 3 | Senior Labour Inspector, 7th Circle | 5299 |

| | | | | | | |
|---|---|---|---|---|---|---|
| | | | | 4 | Senior Labour Inspector, 16th Circle | 55[illegible]8 |
| | | | | 5 | Senior Labour Inspector, 20th Circle | 1051 |
| | | | | 6 | Senior Labour Inspector, 24th Circle | 9059 |
| | | | | 7 | Senior Labour Inspector, 31st Circle | 3532 |
| | | | | 8 | Senior Labour Inspector, 40th Circle | 8393 |
| | | | | 9 | Labour Inspector, Doddaballapur Circle | 8061 |
| | | | | | | **47746** |
| | | 6 | Labour Officer-6 | 1 | Senior Labour Inspector, 9th Circle | 3606 |
| | | | | 2 | Senior Labour Inspector, 11th Circle | 3823 |
| | | | | 3 | Senior Labour Inspector, 14th Circle | 6896 |
| | | | | 4 | Senior Labour Inspector, 17th Circle | 3996 |
| | | | | 5 | Senior Labour Inspector, 18th Circle | 18553 |
| | | | | 6 | Senior Labour Inspector, 35th Circle | 3111 |
| | | | | 7 | Senior Labour Inspector, 38th Circle | 12742 |
| | | | | 8 | Labour Inspector, Anekal Circle | 8791 |
| | | | | | | **61518** |
| 2 | Bagalkote | 7 | Labour Officer Bagalkote | 1 | Labour Inspector, Bagalkote Circle | 9946 |
| | | | | 2 | Labour Inspector, jamakandil Circle | 6170 |
| | | | | 3 | Labour Inspector, Hunagundha Circle | 6998 |
| | | | | 4 | Labour Inspector, Badami Circle | 9146 |
| | | | | 5 | Labour Inspector, Mudhol Circle | 5246 |
| | | | | | | **37506** |
| 3 | Belgaum | 8 | Labour Officer-1, Belgaum | 1 | Senior Labour Inspector, 1st Circle | 9673 |
| | | | | 2 | Senior Labour Inspector, 2nd Circle | 7766 |
| | | | | 3 | Labour Inspector, Gokak Circle | 10381 |
| | | | | 4 | Labour Inspector, Chikkodi Circle | 5958 |
| | | | | 5 | Labour Inspector, Nippani Circle | 4697 |
| | | | | 6 | Labour Inspector, Athani Circle | 4624 |
| | | | | 7 | Labour Inspector, Hukkeri Circle | 6887 |
| | | | | 8 | Labour Inspector, Raybaga Circle | 4377 |
| | | 9 | Labour Officer-2, Belgaum | 1 | Senior Labour Inspector, 3rd Circle | 11822 |
| | | | | 2 | Senior Labour Inspector, 4th Circle | 15054 |
| | | | | 3 | Labour Inspector, Bailahongala Circle | 9693 |
| | | | | 4 | Labour Inspector, Savadaththi Circle | 8755 |
| | | | | 5 | Labour Inspector, Ramdurga Circle | 2348 |
| | | | | | | **102035** |
| 4 | Ballary | 10 | Labour Officer-1, Ballary | 1 | Labour Inspector, 1st Circle, Ballary | 7706 |
| | | | | 2 | Labour Inspector, 1st Circle, Hospete | 6721 |
| | | | | 3 | Labour Inspector, 2nd Circle, Hospete | 9512 |
| | | | | 4 | Labour Inspector, Siraguppa Circle, | 10665 |
| | | 11 | Labour Officer-2, Ballary | 1 | Labour Inspector, 2nd Circle, Ballary | 10252 |
| | | | | 2 | Labour Inspector, Hagaribommanahalli Circle | 7602 |
| | | | | 3 | Labour Inspector, Sandur Circle, Ballary | 12261 |
| | | | | 4 | Labour Inspector, Hoovinahadagali Circle, | 6485 |
| | | | | 5 | Labour Inspector, Koodligi Circle. | 3000 |
| | | | | | | **74204** |
| 5 | Bidar | 12 | Labour Officer-Bidar | 1 | Labour Inspector, Bidar Circle | 35988 |
| | | | | 2 | Labour Inspector, Balki Circle | 17061 |

| | | | | | | |
|---|---|---|---|---|---|---|
| | | | | 3 | Labour Inspector, Humanabad Circle | 12227 |
| | | | | 4 | Labour Inspector, howradh Circle | 4435 |
| | | | | 5 | Labour Inspector, Basavakalyana Circle | 3461 |
| | | | | | | **73172** |
| 6 | Bijapur | 13 | Labour Officer-1, Bijapur | 1 | Labour Inspector, 1st Circle, Bijapur | 13449 |
| | | | | 2 | Labour Inspector, Sindagi Circle, Bijapur | 5628 |
| | | | | 3 | Labour Inspector, Indi Circle, | 3513 |
| | | 14 | Labour Officer-2, Bijapur | 1 | Labour Inspector, 2nd Circle, Bijapur | 17360 |
| | | | | 2 | Labour Inspector, Muddebihala Circle, Bijapur | 13986 |
| | | | | 3 | Labour Inspector, Basava bagevadi Circle | 8617 |
| | | | | | | **62553** |
| 7 | Chamarajnagar | 15 | Labour Officer-Chamarajnagar | 1 | Senior Labour Inspector Chamarajnagar Circle | 38362 |
| | | | | 2 | Labour Inspector, Kollegala Circle | 11241 |
| | | | | 3 | Labour Inspector, Gundlupete Circle | 10905 |
| | | | | | | **60508** |
| 8 | Chitradurga | 16 | Labour Officer-Chitradurga | 1 | Labour Inspector, Chitradurga Circle | 15690 |
| | | | | 2 | Labour Inspector, Challkere Circle | 14604 |
| | | | | 3 | Labour Inspector, HIriyur Circle | 24760 |
| | | | | 4 | Labour Inspector, Hosadurga Circle | 17974 |
| | | | | | | **73028** |
| 9 | Chikkaballapur | 17 | Labour Officer-Chikkaballapur | 1 | Labour Inspector, Chikkaballapur Circle | 6983 |
| | | | | 2 | Labour Inspector, Chinthamani Circle . | 5723 |
| | | | | 3 | Labour Inspector, Shidlagatta Circle . | 6315 |
| | | | | 4 | Labour Inspector, Gouribidhanur Circle . | 3814 |
| | | | | 5 | Labour Inspector, Bagepalli Circle . | 3866 |
| | | | | | | **26701** |

| | | | | | | |
|---|---|---|---|---|---|---|
| 10 | Chikkamagalur | 18 | Labour Officer-1, Chikkamagalur | 1 | Senior Labour Inspector, 1st Circle | 7[illegible]0 |
| | | | | 2 | Senior Labour Inspector, Terikere Circle | 8010 |
| | | | | 3 | Senior Labour Inspector, Koppa Circle | 1222 |
| | | 19 | Labour Officer-2, Chikkamagalur | 1 | Senior Labour Inspector, 2nd Circle | 5606 |
| | | | | 2 | Senior Labour Inspector, Mudigere Circle | 1282 |
| | | | | 3 | Labour Inspector, Kadur Circle | 6448 |
| | | | | | | **30108** |
| 11 | Davanagere | 20 | Labour Officer-Davanagere | 1 | Labour Inspector, 1st Circle | 10964 |
| | | | | 2 | Labour Inspector, 2nd Circle | 13452 |
| | | | | 3 | Labour Inspector, 3rd Circle | 11806 |
| | | | | 4 | Labour Inspector, Harihara Circle | 8882 |
| | | | | 5 | Labour Inspector, Chennagiri Circle | 8718 |
| | | | | 6 | Labour Inspector, Jagluru Circle | 3120 |
| | | | | 7 | Labour Inspector, Harappanahalli circle | 11273 |
| | | | | 8 | Labour Inspector, Honnalli Circle | 9331 |
| | | | | | | **77546** |
| 12 | Gadag | 21 | Labour Officer-Gadag | 1 | Labour Inspector, 1st Circle | 6211 |
| | | | | 2 | Labour Inspector, 2nd Circle | 2665 |
| | | | | 3 | Labour Inspector, Naragundha Circle | 3011 |
| | | | | 4 | Labour Inspector, Mundargi Circle | 2558 |
| | | | | 5 | Labour Inspector, Shirahatti Circle | 3976 |
| | | | | 6 | Labour Inspector, Rona Circle | 2676 |
| | | | | | | **21097** |
| 13 | Gulbarga | 22 | Labour Officer-Gulbarga | 1 | Senior Labour Inspector, 1st Circle | 26652 |
| | | | | 2 | Senior Labour Inspector, 2ndCircle | 20404 |
| | | | | 3 | Senior Labour Inspector, 3rd Circle | 11290 |
| | | | | 4 | Labour Inspector, Sedam Circle | 6457 |
| | | | | 5 | Labour Inspector, Chiththapur Circle | 6321 |
| | | | | | | **71124** |
| 14 | Haveri | 23 | Labour Officer-Haveri | 1 | Labour Inspector, Haveri Circle | 9479 |
| | | | | 2 | Labour Inspector, Ranibennur Circle | 10647 |
| | | | | 3 | Labour Inspector, Byadagi Circle | 7603 |
| | | | | 4 | Labour Inspector, Savannuru Circle | 4697 |
| | | | | | | **32426** |
| 15 | Hassan | 24 | Labour Officer-Hassan | 1 | Senior Labour Inspector, Hassan Circle | 11345 |
| | | | | 2 | Senior Labour Inspector, Belur Circle | 7702 |
| | | | | 3 | Senior Labour Inspector, Sakaleshpur | 5531 |
| | | | | 4 | Labour Inspector, Hassan Circle | 21337 |
| | | | | 5 | Labour Inspector, Arasikere Circle | 7304 |
| | | | | 6 | Labour Inspector, Holenarsipura Circle | 4059 |
| | | | | 7 | Labour Inspector, Channarayapatna Circle | 7493 |
| | | | | 8 | Labour Inspector, Arakalagudu Circle | 3416 |
| | | | | | | **68187** |
| 16 | Hubli (Dharwad) | 25 | Labour Officer-1, Hubli | 1 | Senior Labour Inspector, 1stCircle, Dharwad | 14456 |
| | | | | 2 | Senior Labour Inspector, 1st Circle, Hubli Dharwad | 6517 |
| | | | | 3 | Senior Labour Inspector, 4thCircle, Hubli Dharwad | 6820 |

| | | | | | | |
|---|---|---|---|---|---|---|
| | | 26 | Labour Officer-2, Hubli | 1 | Senior Labour Inspector, 2ndCircle, Dharwad | 7916 |
| | | | | 2 | Senior Labour Inspector, 2ndCircle, Hubli Dharwad | 6972 |
| | | | | 3 | Senior Labour Inspector, 3rd Circle, Hubli Dharwad | 10222 |
| | | | | 4 | Labour Inspector, kalagatagi Circle | 29355 |
| | | | | | | **82258** |
| 17 | Koppal | 27 | Labour Officer-Koppal | 1 | Labour Inspector, Koppal Circle | 54465 |
| | | | | 2 | Labour Inspector, Kushtagi Circle | 19663 |
| | | | | 3 | Labour Inspector, Gangavathi Circle | 21334 |
| | | | | | | **95462** |
| 18 | Karwar | 28 | Labour Officer-Karwar | 1 | Labour Inspector, Karwar Circle | 3440 |
| | | | | 2 | Labour Inspector, Bhatkala Circle | 7796 |
| | | | | 3 | Labour Inspector, Sirsi Circle | 3337 |
| | | | | 4 | Labour Inspector, Kumuta Circle | 8237 |
| | | | | 5 | Labour Inspector, Dandeli Circle | 11737 |
| | | | | 6 | Labour Inspector, Ankola Circle | 3233 |
| | | | | 7 | Labour Inspector, Honnavara Circle | 11746 |
| | | | | 8 | Labour Inspector, Yallapura Circle | 4396 |
| | | | | 9 | Labour Inspector, Mundagodu Circle | 2752 |
| | | | | 10 | Labour Inspector, Haliyala Circle | 3501 |
| | | | | 11 | Labour Inspector, siddapur Circle | 2688 |
| | | | | | | **62863** |
| 19 | Kolar | 29 | Labour Officer-Kolar | 1 | Labour Inspector, Kolar Circle | 33746 |
| | | | | 2 | Labour Inspector, Bangarpet Circle | 14806 |
| | | | | 3 | Labour Inspector, K.G.F Circle | 5884 |
| | | | | 4 | Labour Inspector, Malur Circle | 11387 |
| | | | | 5 | Labour Inspector, Mulabagilu Circle | 19714 |
| | | | | | | **85537** |
| 20 | Mandya | 30 | Labour Officer-1, Mandya | 1 | Labour Inspector, 1stCircle | 10484 |
| | | | | 2 | Labour Inspector, Malavalli Circle | 9729 |
| | | | | 3 | Labour Inspector, Pandavpur Circle | 5247 |
| | | | | 4 | Labour Inspector, Srirangapatna Circle | 3840 |
| | | 31 | Labour Officer-2, Mandya | 1 | Labour Inspector, 2ndCircle | 4853 |
| | | | | 2 | Labour Inspector, K.R.Pete Circle | 4600 |
| | | | | 3 | Labour Inspector, Maddur Circle | 7396 |
| | | | | 4 | Labour Inspector, Nagamangala Circle | 1683 |
| | | | | | | **47832** |
| 21 | Madikeri | 32 | Labour Officer-Madikeri | 1 | Senior Labour Inspector, Madikeri Circle | 1453 |
| | | | | 2 | Senior Labour Inspector, Somavarpete Circle | 1289 |
| | | | | 3 | Senior Labour Inspector, Virajpete Circle | 1548 |
| | | | | | | **4290** |
| 22 | Mangalore | 33 | Labour Officer-1, Mangalore | 1 | Senior Labour Inspector, 3rd Circle | 3808 |
| | | | | 2 | Senior Labour Inspector, 4thCircle | 12770 |
| | | | | 3 | Labour Inspector, Belthangadi Circle | 6419 |
| | | 34 | Labour Officer-2, Mangalore | 1 | Senior Labour Inspector, 1stCircle | 5703 |
| | | | | 2 | Senior Labour Inspector, 2ndCircle | 3134 |
| | | | | 3 | Senior Labour Inspector, Puththur Circle | 6996 |

| | | | | | | |
|---|---|---|---|---|---|---|
| | | | | 4 | Labour Inspector, Bantawala Circle | 15054 |
| | | | | | | **53884** |
| 23 | Mysore | 35 | Labour Officer-Mysore | 1 | Senior Labour Inspector, 1stCircle | 9502 |
| | | | | 2 | Senior Labour Inspector, 2ndCircle | 7441 |
| | | | | 3 | Senior Labour Inspector, 3rdCircle | 8350 |
| | | | | 4 | Senior Labour Inspector, 4thCircle | 8728 |
| | | | | 5 | Labour Inspector, Nanjanagudu Circle | 5127 |
| | | | | 6 | Labour Inspector, Hunsur Circle | 7892 |
| | | | | 7 | Labour Inspector, K.R.Nagar Circle | 6585 |
| | | | | 8 | Labour Inspector, T. Narsipur Circle | 4173 |
| | | | | 9 | Labour Inspector, Piriyapatna Circle | 6319 |
| | | | | 10 | Labour Inspector, HD Kote Circle | 5870 |
| | | | | | | **69987** |
| 24 | Raichur | 36 | Labour Officer-Raichur | 1 | Labour Inspector, 1stCircle | 19444 |
| | | | | 2 | Labour Inspector , 2ndCircle | 5128 |
| | | | | 3 | Labour Inspector, Sindanur Circle I/C | 17239 |
| | | | | 4 | Labour Inspector, Manvi Circle I/C | 10333 |
| | | | | 5 | Labour Inspector, Lingasugur Circle | 12423 |
| | | | | | | **64567** |
| 25 | Ramnagar | 37 | Labour Officer-Ramnagar | 1 | Labour Inspector, Ramnagar Circle | 9552 |
| | | | | 2 | Labour Inspector, Kanakapur Circle | 13034 |
| | | | | 3 | Labour Inspector, Channapatna Circle | 11554 |
| | | | | 4 | Labour Inspector, Magadi Circle | 5210 |
| | | | | | | **39350** |
| 26 | Shimoga | 38 | Labour Officer-Shimoga | 1 | Labour Inspector, 1stCircle, Shimoga | 18761 |
| | | | | 2 | Labour Inspector, 2ndCircle, Shimoga | 6219 |
| | | | | 3 | Labour Inspector, 1st Circle, Bhadravathi | 5096 |
| | | | | 4 | Labour Inspector, 2ndCircle, Bhadravathi | 4054 |
| | | | | 5 | Labour Inspector, Sagar Circle | 12606 |
| | | | | 6 | Labour Inspector, Shikaripur Circle | 17269 |
| | | | | 7 | Labour Inspector, Thirthahalli Circle | 5555 |
| | | | | 8 | Labour Inspector, Soraba Circle | 5641 |
| | | | | 9 | Labour Inspector, Hosanagar Circle | 9063 |
| | | | | | | **84264** |
| 27 | Tumkur | 39 | Labour Officer-Tumkur | 1 | Labour Inspector, 1stCircle, Tumkur | 7842 |
| | | | | 2 | Labour Inspector, 2ndCircle,Tumkur | 2604 |
| | | | | 3 | Labour Inspector, Thiptur Circle | 4197 |
| | | | | 4 | Labour Inspector, Kunigal Circle | 6619 |
| | | | | 5 | Labour Inspector Madhugiri Circle | 5705 |
| | | | | 6 | Labour Inspector, Shira Circle | 9695 |
| | | | | 7 | Labour Inspector, Gubbi Circle | 5694 |
| | | | | 8 | Labour Inspector, Pavgada Circle | 9987 |
| | | | | 9 | Labour Inspector, Chikkanayakana Halli Circle | 5639 |
| | | | | 10 | Labour Inspector, Turvekere Circle | 2433 |
| | | | | | | **60415** |
| 28 | Udupi | 40 | Labour Officer-Udupi | 1 | Labour Inspector, 1stCircle, Udupi | 8020 |
| | | | | 2 | Labour Inspector, 2nd Circle, Udupi | 6471 |
| | | | | 3 | Labour Inspector, Kundapura Circle | 8654 |
| | | | | 4 | Labour Inspector, Karkala Circle | 6731 |

| | | | | | | |
|---|---|---|---|---|---|---|
| | | | | | | **29876** |
| 29 | Yadgiri | 41 | Labour Officer-Yadagiri | 1 | Labour Inspector, Yadagiri Circle | 12657 |
| | | | | 2 | Labour Inspector, Surapura Circle | 8388 |
| | | | | 3 | Labour Inspector, shahapur Circle | 5398 |
| | | | | | | **26443** |
| | ಒಟ್ಟು | | | | | **19,54,440/-** |

ಪ್ರಶ್ನೆ ಸಂಖ್ಯೆ: 2048 ರ ಅನುಬಂಧ

## ಅನುಬಂಧ–3

Financial Year

| ಕ್ರ. ಸಂ. | ಜಿಲ್ಲೆಗಳು | 2010–11 | | 2011–12 | | 2012–13 | | 2013–14 | | 2014–15 | | 2015–16 | | |
|---|---|---|---|---|---|---|---|---|---|---|---|---|---|---|
| | | ಮಹಿಳೆಯರು | ಪುರುಷರು | ಮಹಿಳೆಯರು | ಪುರುಷರು | ಮಹಿಳೆಯರು | ಪುರುಷರು | ಮಹಿಳೆಯರು | ಪುರುಷರು | ಮಹಿಳೆಯರು | ಪುರುಷರು | ಮಹಿಳೆಯರು | ಪುರುಷರು | |
| 1 | ಬಾಗಲಕೋಟೆ | 0 | 0 | 100 | 4 | 197 | 18 | 10 | 3 | 239 | 82 | 174 | 80 | 907 |
| 2 | ಬೆಂಗಳೂರು | 134 | 1 | 1017 | 275 | 185 | 99 | 1723 | 988 | 2106 | 1450 | 344 | 288 | 8610 |
| 3 | ಬೆಳಗಾವಿ | 18 | 10 | 173 | 262 | 43 | 123 | 216 | 84 | 2664 | 913 | 591 | 414 | 5511 |
| 4 | ಬಳ್ಳಾರಿ | 0 | 0 | 255 | 86 | 131 | 91 | 164 | 107 | 505 | 167 | 183 | 105 | 1794 |
| 5 | ಬೀದರ್ | 0 | 0 | 0 | 1 | 34 | 1 | 0 | 0 | 87 | 24 | 61 | 45 | 253 |
| 6 | ಬಿಜಾಪುರ | 0 | 0 | 2 | 0 | 7 | 0 | 22 | 18 | 309 | 160 | 134 | 46 | 698 |
| 7 | ಚಾಮರಾಜನಗರ | 0 | 0 | 108 | 1 | 9 | 0 | 31 | 6 | 299 | 73 | 53 | 18 | 598 |
| 8 | ಚಿಕ್ಕಬಳ್ಳಾಪುರ | 3 | 0 | 470 | 64 | 22 | 6 | 18 | 6 | 208 | 18 | 1 | 1 | 817 |
| 9 | ಚಿಕ್ಕಮಗಳೂರು | 1 | 0 | 333 | 341 | 22 | 4 | 270 | 127 | 258 | 256 | 125 | 288 | 2025 |
| 10 | ಚಿತ್ರದುರ್ಗ | 0 | 0 | 43 | 14 | 61 | 2 | 31 | 14 | 121 | 18 | 132 | 1422 | 1858 |
| 11 | ದಕ್ಷಿಣ ಕನ್ನಡ | 392 | 180 | 827 | 593 | 345 | 209 | 1237 | 683 | 1161 | 543 | 150 | 75 | 6395 |
| 12 | ದಾವಣಗೆರೆ | 0 | 0 | 183 | 9 | 400 | 25 | 107 | 12 | 392 | 110 | 12 | 10 | 1260 |
| 13 | ಧಾರವಾಡ | 9 | 0 | 125 | 126 | 46 | 6 | 77 | 9 | 1361 | 592 | 84 | 84 | 2519 |
| 14 | ಗದಗ | 0 | 0 | 465 | 25 | 94 | 3 | 16 | 5 | 353 | 215 | 37 | 19 | 1232 |
| 15 | ಗುಲ್ಬರ್ಗ | 0 | 0 | 115 | 10 | 102 | 38 | 17 | 18 | 36 | 23 | 66 | 28 | 453 |
| 16 | ಹಾಸನ | 191 | 45 | 283 | 70 | 75 | 13 | 156 | 56 | 430 | 237 | 89 | 193 | 1838 |
| 17 | ಹಾವೇರಿ | 0 | 0 | 1 | 0 | 30 | 2 | 35 | 9 | 91 | 40 | 4 | 4 | 216 |
| 18 | ಕಾರವಾರ | 0 | 0 | 0 | 0 | 0 | 0 | 4 | 0 | 15 | 5 | 2 | 2 | 28 |
| 19 | ಕೊಡಗು | 0 | 0 | 45 | 18 | 14 | 1 | 21 | 5 | 39 | 53 | 34 | 14 | 244 |

| | | | | | | | | | | | | | | |
|---|---|---|---|---|---|---|---|---|---|---|---|---|---|---|
| 20 | ಕೋಲಾರ | 49 | 8 | 190 | 44 | 238 | 188 | 78 | 10 | 290 | 226 | 127 | 269 | 1717 |
| 21 | ಕೊಪ್ಪಳ | 0 | 0 | 3 | 1 | 0 | 0 | 15 | 5 | 157 | 89 | 61 | 45 | 376 |
| 22 | ಮಂಡ್ಯ | 5 | 0 | 4 | 0 | 82 | 20 | 108 | 28 | 327 | 238 | 74 | 65 | 951 |
| 23 | ಮೈಸೂರು | 0 | 0 | 505 | 12 | 202 | 106 | 141 | 37 | 829 | 273 | 68 | 49 | 2222 |
| 24 | ರಾಯಚೂರು | 0 | 0 | 288 | 8 | 279 | 56 | 11 | 3 | 34 | 12 | 72 | 88 | 851 |
| 25 | ರಾಮನಗರ | 41 | 0 | 16 | 0 | 2 | 0 | 240 | 128 | 216 | 126 | 22 | 26 | 817 |
| 26 | ಶಿವಮೊಗ್ಗ | 0 | 0 | 193 | 75 | 0 | 2 | 125 | 61 | 588 | 150 | 148 | 64 | 1406 |
| 27 | ತುಮಕೂರು | 0 | 0 | 222 | 25 | 3 | 3 | 134 | 31 | 195 | 142 | 26 | 12 | 793 |
| 28 | ಉಡುಪಿ | 7 | 1 | 1042 | 332 | 110 | 51 | 546 | 206 | 602 | 156 | 60 | 28 | 3141 |
| 29 | ಉತ್ತರ ಕನ್ನಡ | 0 | 0 | 194 | 159 | 27 | 53 | 15 | 7 | 292 | 62 | 67 | 45 | 921 |
| 30 | ಯಾದಗಿರಿ | 0 | 0 | 0 | 0 | 6 | 1 | 2 | 0 | 9 | 5 | 20 | 172 | 215 |
| | ಒಟ್ಟು | 850 | 245 | 7202 | 2555 | 2766 | 1121 | 5570 | 2666 | 14213 | 6458 | 3021 | 3999 | 50666 |

<u>ಅನುಬಂಧ–4</u>

1. ದರ್ಜಿಗಳು
2. ದೋಬಿಗಳು
3. ಹಮಾಲಿಗಳು
4. ಹೋಟೆಲ್ ಕಾರ್ಮಿಕರು
5. ಆಟೋ ಮತ್ತು ಟ್ಯಾಕ್ಸಿ ಚಾಲಕರು ಹಾಗೂ ಖಾಸಗಿ ಬಸ್, ಲಾರಿ ಚಾಲಕರು ಹಾಗೂ ನಿರ್ವಾಹಕರು
6. ಆಟೋಮೊಬೈಲ್ ವರ್ಕ್‌ಶಾಪ್‌ಗಳಲ್ಲಿ ಕೆಲಸ ಮಾಡುವ ಕಾರ್ಮಿಕರು ಮತ್ತು
7. ಗೃಹ ಕಾರ್ಮಿಕರು
8. ಕೃಷಿ/ತೋಟಗಾರಿಕೆ/ಹೈನುಗಾರಿಕೆ ಕೆಲಸಗಳಲ್ಲಿ ತೊಡಗಿರುವ ಕೂಲಿ ಕಾರ್ಮಿಕರು
9. ನಾರಿನ ಉದ್ದಿಮೆಯಲ್ಲಿ ತೊಡಗಿರುವ ಕೂಲಿ ಕಾರ್ಮಿಕರು
10. ಮನೆಗಳಲ್ಲಿ ನೇಯ್ಗೆ ಕೆಲಸ ಮಾಡುವ ನೇಕಾರರು
11. ಮೀನುಗಾರರು
12. ಕುಂಬಾರರು
13. ಚಮ್ಮಾರರು
14. ಕ್ಷೌರಿಕರು
15. ಕಸಾಯಿ ಖಾನೆ ಕಾರ್ಮಿಕರು
16. ಕಮ್ಮಾರರು
17. ಚಿನಿವಾರರು/ಅಕ್ಕಸಾಲಿಗರು
18. ಮನೆಗಳಲ್ಲಿ ಬೀಡಿ ಕಟ್ಟುವವರು
19. ಮನೆಗಳಲ್ಲಿ ಅಗರಬತ್ತಿ ತಯಾರಿಸುವ ಕಾರ್ಮಿಕರು
20. ಶಿಲ್ಪಕಾರರು/ ಹಸ್ತ ಕುಶಲ ಕಾರ್ಮಿಕರು
21. ಚಿತ್ರ ಬಿಡಿಸುವವರು
22. ಬಿದಿರಿನ ವಸ್ತುಗಳನ್ನು ತಯಾರು ಮಾಡುವವರು
23. ಖಾದ್ಯ ತೈಲ/ಮನೆಯಲ್ಲಿ ಆಹಾರ ವಸ್ತುಗಳ ಸಂಸ್ಕರಣೆ ಕೆಲಸದಲ್ಲಿ ತೊಡಗಿರುವವರು.
24. ಟಿಂಬರ್ ಕೆಲಸದಲ್ಲಿ ತೊಡಗಿರುವ ಕಾರ್ಮಿಕರು
25. ರೇಷ್ಮೆ ಕಾರ್ಮಿಕರು
26. ಕಾಟನ್ ಗಿನ್ನಿಂಗ್ ಮತ್ತು ಪ್ರೊಸೆಸಿಂಗ್ ಕೆಲಸದಲ್ಲಿ ತೊಡಗಿರುವಕಾರ್ಮಿಕರು
27. ಮುದ್ರಣ ಕೆಲಸದಲ್ಲಿ ತೊಡಗಿರುವ ಕಾರ್ಮಿಕರು
28. ಕಲ್ಲು ಒಡೆಯುವಕಾರ್ಮಿಕರು
29. ಚರ್ಮ ಹದ ಮಾಡುವ ಕೆಲಸದಲ್ಲಿ ತೊಡಗಿರುವ ಕಾರ್ಮಿಕರು
30. ಎಲ್ಲಾ ವಿಧದ ಮಿಲ್‌ಗಳಲ್ಲಿ ಕೆಲಸ ಮಾಡುವ ಕಾರ್ಮಿಕರು
31. ಬೀದಿ ಬದಿಯ ಮಾರಟಗಾರರು
32. ಚಾಲಕರು/ನಿರ್ವಾಹಕರು/ಸಹಾಯಕರು/ ಕ್ಲೀನರ್‌ಗಳು/ಗಾಡಿ ಎಳೆಯುವವರು/ರಿಕ್ಷಾ ವಾಲಾಗಳು/ ಟಾಂಗಾವಾಲಾಗಳು.
33. ಎಲ್ಲಾ ಬಗೆಯ ರಿಪೇರಿ ಕೆಲಸ ಮತ್ತು ತ್ಯಾಜ್ಯ ವಿಲೇವಾರಿ ಕೆಲಸದಲ್ಲಿ ತೊಡಗಿರುವ ಕಾರ್ಮಿಕರು
34. ಚಿಂದಿ ಆಯುವವರು
35. ಅಡಿಗೆ ಕೆಲಸಗಾರರು/ಕಲ್ಯಾಣ ಮಂಟಪಗಳಲ್ಲಿ ಶುಚಿ ಕೆಲಸದಲ್ಲಿ ತೊಡಗಿರುವವರು/ಮಧ್ಯಾಹ್ನದ ಬಿಸಿ ಊಟದ ಕಾರ್ಮಿಕರು ಮತ್ತು ಸಹಾಯಕರು
36. ಸಫಾಯಿ ಕರ್ಮಚಾರಿಗಳು
37. ಕಛೇರಿಗಳಲ್ಲಿ ಶುಚಿ ಕೆಲಸದಲ್ಲಿ ತೊಡಗಿರುವ ಗುತ್ತಿಗೆ ಕಾರ್ಮಿಕರು
38. ಗುತ್ತಿಗೆ ಆಧಾರದ ಮೇಲೆ ನೇಮಕವಾಗಿರುವ ಭದ್ರತಾ ಸಿಬ್ಬಂದಿ/ವಾಚ್‌ಮೆನ್‌ಗಳು
39. ಪೋರ್ಟರ್
40. ಪ್ರವಾಸಿ ಗೈಡ್‌ಗಳು

41. ಮಂಡಕ್ಕಿ ಭಟ್ಟಿ ಕಾರ್ಮಿಕರು
42. ಛಾಯಾವೃತ್ತಿ ಕಾರ್ಮಿಕರು
43. ಇತರೆ ವರ್ಗ(ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಕಾಯ್ದೆ 2008ರ ಕಲಂ 2(ಟ) ಹಾಗೂ ಕಲಂ 2(ಟ) ರ ವ್ಯಾಖ್ಯಾನಕ್ಕೆ ಒಳಪಡುವ ಅಸಂಘಟಿತ ವರ್ಗದ ಎಲ್ಲಾ ಕಾರ್ಮಿಕರು)

## ಅನುಬಂಧ–05
## ಫಲಾನುಭವಿಗಳಿಗೆ ಸಿಗುವ ಸೌಲಭ್ಯಗಳು

1. **ಪಿಂಚಣಿ ಸೌಲಭ್ಯ: ಮೂರು ವರ್ಷ ಸದಸ್ಯತ್ವದೊಂದಿಗೆ 60 ವರ್ಷ ಪೂರೈಸಿದ ಫಲಾನುಭವಿಗೆ** ಮಾಸಿಕ ರೂ.1,000/–
2. **ದುರ್ಬಲತೆ ಪಿಂಚಣಿ:** ಫಲಾನುಭವಿಗೆ ಖಾಯಿಲೆಗಳಿಂದ ಹಾಗೂ ಕಟ್ಟಡ ಕಾಮಗಾರಿಗಳ ಅಪಘಾತದಿಂದ ಶಾಶ್ವತ/ಭಾಗಶಃ ಅಂಗವಿಕಲತೆ ಹೊಂದಿದ್ದರೆ ಮಾಸಿಕ **ರೂ.1,000/–** ಪಿಂಚಣಿ ಹಾಗೂ ಶೇಕಡವಾರು ದುರ್ಬಲತೆಯನ್ನಾಧರಿಸಿ **ರೂ. 2,00,000/–**ದವರೆಗೆ ಅನುಗ್ರಹ ರಾಶಿ ಸಹಾಯಧನ.
3. **ಟ್ರೈನಿಂಗ್–ಕಮ್–ಟೂಲ್‌ಕಿಟ್ ಸೌಲಭ್ಯ (ಶ್ರಮ ಸಾಮರ್ಥ್ಯ) :** ರೂ.20,000/–ವರೆಗೆ
4. **ವಸತಿ ಸೌಲಭ್ಯ (ಕಾರ್ಮಿಕ ಗೃಹ ಭಾಗ್ಯ):** ರೂ.2,00,000/–ದವರೆಗೆ ಮುಂಗಡ ಸೌಲಭ್ಯ
5. **ಹೆರಿಗೆ ಸೌಲಭ್ಯ (ತಾಯಿ ಲಕ್ಷ್ಮೀ ಬಾಂಡ್):** ಮಹಿಳಾ ಫಲಾನುಭವಿಯ ಮೊದಲ ಎರಡು ಮಕ್ಕಳಿಗೆ ಹೆಣ್ಣು ಮಗುವಿನ ಜನನಕ್ಕೆ **ರೂ. 30,000/–** ಮತ್ತು ಗಂಡು ಮಗುವಿನ ಜನನಕ್ಕೆ **ರೂ.20,000/–**
6. **ಅಂತ್ಯಕ್ರಿಯೆ ವೆಚ್ಚ : ರೂ.4,000/–** ಹಾಗೂ ಎಕ್ಸ್‌ಗ್ರೇಷಿಯಾ **ರೂ.50,000/–**ಸಹಾಯಧನ
7. **ಶೈಕ್ಷಣಿಕ ಸಹಾಯಧನ (ಕಲಿಕೆ ಭಾಗ್ಯ): ಫಲಾನುಭವಿಯ ಇಬ್ಬರು ಮಕ್ಕಳ ವಿದ್ಯಾಭ್ಯಾಸಕ್ಕಾಗಿ:**
   - i) 1, 2 ಹಾಗೂ 3ನೇ ತರಗತಿಯಲ್ಲಿ ಉತ್ತೀರ್ಣರಾದವರಿಗೆ **ರೂ. 2,000/–**
   - ii) 4, 5 ಹಾಗೂ 6ನೇ ತರಗತಿಯಲ್ಲಿ ಉತ್ತೀರ್ಣರಾದವರಿಗೆ **ರೂ. 3,000/–**
   - iii) 7 ಹಾಗೂ 8ನೇ ತರಗತಿ ಉತ್ತೀರ್ಣರಾದವರಿಗೆ **ರೂ. 4,000/–**
   - iv) 9, 10 ನೇ ತರಗತಿ ಹಾಗೂ ಪ್ರಥಮ ಪಿಯುಸಿಉತ್ತೀರ್ಣರಾದವರಿಗೆ **6,000/–**
   - v) ದ್ವಿತೀಯ ಪಿ.ಯು.ಸಿ ಉತ್ತೀರ್ಣರಾದವರಿಗೆ **ರೂ. 8,000/–**
   - vi) ಐಟಿಐ ಮತ್ತು ಡಿಪ್ಲೋಮಾ ಉತ್ತೀರ್ಣರಾದವರಿಗೆ ಪ್ರತಿ ವರ್ಷಕ್ಕೆ **ರೂ. 7,000/–**
   - vii) ಪದವಿ ಉತ್ತೀರ್ಣರಾದವರಿಗೆ ಪ್ರತಿ ವರ್ಷಕ್ಕೆ **ರೂ. 10,000/–**
   - viii) ಸ್ನಾತಕೋತ್ತರ ಪದವಿ ಸೇರ್ಪಡೆಗೆ **ರೂ. 20,000/–** ಹಾಗೂ ಪ್ರತಿ ವರ್ಷ **ರೂ.10,000/–**ಗಳಂತೆ (ಎರಡು ವರ್ಷಗಳಿಗೆ)
   - ix) ಇಂಜಿನಿಯರಿಂಗ್ ಕೋರ್ಸ್‌ಗೆ ಸೇರ್ಪಡೆಗೆ **ರೂ.25,000/–** ಹಾಗೂ ಪ್ರತಿ ವರ್ಷ ತೇರ್ಗಡೆಗೆ **ರೂ.20,000/–**
   - x) ವೈದ್ಯಕೀಯ ಕೋರ್ಸ್‌ಗೆ ಸೇರ್ಪಡೆಗೆ **ರೂ.30,000/–** ಹಾಗೂ ಪ್ರತಿ ವರ್ಷ ತೇರ್ಗಡೆಗೆ **ರೂ.25,000/–**
   - xi) ಪಿಹೆಚ್‌ಡಿ ಕೋರ್ಸ್‌ಗೆ ಪ್ರತಿ ವರ್ಷಕ್ಕೆ **ರೂ.20,000/–** (ಗರಿಷ್ಠ ಎರಡು ವರ್ಷಗಳು) ಮತ್ತು ಪಿಹೆಚ್‌ಡಿ ಪ್ರಬಂಧ ಸ್ವೀಕಾರದ ನಂತರ ಹೆಚ್ಚುವರಿಯಾಗಿ **ರೂ.20,000/–**

**ಪ್ರತಿಭಾವಂತ ಮಕ್ಕಳಿಗಾಗಿ:**

- (a) ಎಸ್.ಎಸ್.ಎಲ್.ಸಿ ಅಥವಾ ತತ್ಸಮಾನ ತರಗತಿಯಲ್ಲಿ ಶೇ.75 ಅಂಕ ಪಡೆದವರಿಗೆ **ರೂ.5,000/–**
- (b) ಪಿಯುಸಿ ಅಥವಾ ತತ್ಸಮಾನ ತರಗತಿಯಲ್ಲಿ ಶೇ.75 ಅಂಕ ಪಡೆದವರಿಗೆ **ರೂ.7,000/–**
- (c) ಪದವಿ ಅಥವಾ ತತ್ಸಮಾನ ಕೋರ್ಸ್‌ನಲ್ಲಿ ಶೇ.75 ಅಂಕ ಪಡೆದವರಿಗೆ **ರೂ.10,000/–**
- (d) ಸ್ನಾತಕೋತ್ತರ ಪದವಿ ಅಥವಾ ತತ್ಸಮಾನ ಕೋರ್ಸ್‌ನಲ್ಲಿ ಶೇ.75 ಅಂಕ ಪಡೆದವರಿಗೆ **ರೂ.15,000/–**

8. **ವೈದ್ಯಕೀಯ ಸಹಾಯಧನ (ಕಾರ್ಮಿಕ ಆರೋಗ್ಯ ಭಾಗ್ಯ):** ನೋಂದಾಯಿತ ಫಲಾನುಭವಿ ಹಾಗೂ ಅವರ ಅವಲಂಭಿತರಿಗೆ **ರೂ.300/–** ರಿಂದ ರೂ.10,000/–**ವರೆಗೆ**

9. **ಅಪಘಾತ ಪರಿಹಾರ:** ಮರಣ ಹೊಂದಿದ್ದಲ್ಲಿ **ರೂ.5,00,000/–,** ಸಂಪೂರ್ಣ ಶಾಶ್ವತ ದುರ್ಬಲತೆಯಾದಲ್ಲಿ **ರೂ. 2,00,000/– ಮತ್ತು** ಭಾಗಶಃ ಶಾಶ್ವತ ದುರ್ಬಲತೆಯಾದಲ್ಲಿ **ರೂ.1,00,000/–**

10. **ಪ್ರಮುಖ ವೈದ್ಯಕೀಯ ವೆಚ್ಚ ಸಹಾಯಧನ (ಕಾರ್ಮಿಕ ಚಿಕಿತ್ಸಾ ಭಾಗ್ಯ):** ಹೃದ್ರೋಗ, ಕಿಡ್ನಿ ಜೋಡಣೆ, ಕ್ಯಾನ್ಸರ್ ಶಸ್ತ್ರಚಿಕಿತ್ಸೆ, ಕಣ್ಣಿನ ಶಸ್ತ್ರಚಿಕಿತ್ಸೆ, ಪಾರ್ಶ್ವವಾಯು, ಮೂಳೆ ಶಸ್ತ್ರಚಿಕಿತ್ಸೆ, ಗರ್ಭಕೋಶ ಶಸ್ತ್ರಚಿಕಿತ್ಸೆ, ಅಸ್ತಮ ಚಿಕಿತ್ಸೆ, ಗರ್ಭಪಾತ ಪ್ರಕರಣಗಳು, ಪಿತ್ತಕೋಶದ ತೊಂದರೆಗೆ ಸಂಬಂಧಿತ ಚಿಕಿತ್ಸೆ, ಮೂತ್ರ ಪಿಂಡದಲ್ಲಿನ ಕಲ್ಲು ತೆಗೆಯುವ ಚಿಕಿತ್ಸೆ, ಮೆದುಳಿನ ರಕ್ತಸ್ರಾವದ ಚಿಕಿತ್ಸೆ, ಅಲ್ಸರ್ ಚಿಕಿತ್ಸೆ, ಡಯಾಲಿಸಿಸ್ ಚಿಕಿತ್ಸೆ, ಕಿಡ್ನಿ ಶಸ್ತ್ರಚಿಕಿತ್ಸೆ, ಇ.ಎನ್.ಟಿ. ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ನರರೋಗ ಶಸ್ತ್ರಚಿಕಿತ್ಸೆ, ವ್ಯಾಸ್ಕ್ಯೂಲರ್ ಶಸ್ತ್ರಚಿಕಿತ್ಸೆ, ಅನ್ನನಾಳದ ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ಕರುಳಿನ ಶಸ್ತ್ರಚಿಕಿತ್ಸೆ, ಸ್ತನ ಸಂಬಂಧಿತ ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ಹರ್ನಿಯ ಶಸ್ತ್ರಚಿಕಿತ್ಸೆ, ಅಪೆಂಡಿಕ್ಸ್ ಶಸ್ತ್ರಚಿಕಿತ್ಸೆ, ಮೂಳೆ ಮುರಿತ/ಡಿಸ್‌ಲೊಕೇಶನ್ ಚಿಕಿತ್ಸೆ, ಸಾಮಾನ್ಯ ಶಸ್ತ್ರಚಿಕಿತ್ಸೆಗಳಿಗೆ **ರೂ.2,00,000/–**ವರೆಗೆ

11. **ಮದುವೆ ಸಹಾಯಧನ (ಗೃಹ ಲಕ್ಷ್ಮೀ ಬಾಂಡ್):** ಫಲಾನುಭವಿ ಅಥವಾ ಅವರ ಇಬ್ಬರು ಮಕ್ಕಳ ಮದುವೆಗೆ ತಲಾ **ರೂ.50,000/–**

12. **LPG ಸಂಪರ್ಕ ಸೌಲಭ್ಯ (ಕಾರ್ಮಿಕ ಅನಿಲ ಭಾಗ್ಯ):** ಅನಿಲ ಸಂಪರ್ಕದೊಂದಿಗೆ ಎರಡು ಬರ್ನರ್ ಸ್ಟೌವ್

13. **ಬಿಎಂಟಿಸಿ ಬಸ್ ಪಾಸ್ ಸೌಲಭ್ಯ:** ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಕೆಲಸ ಮಾಡುತ್ತಿರುವಂತಹ / ವಾಸಸ್ಥಳದಿಂದ ಬೆಂಗಳೂರಿಗೆ ಪ್ರಯಾಣಿಸುವ ನೋಂದಾಯಿತ ಕಟ್ಟಡ ಕಾರ್ಮಿಕರಿಗೆ

14. **ಕೆಎಸ್‌ಆರ್‌ಟಿಸಿ ಬಸ್ ಪಾಸ್‌ನ ಸೌಲಭ್ಯ:** ರಾಜ್ಯದಾದ್ಯಂತ ವಿದ್ಯಾಭ್ಯಾಸದಲ್ಲಿ ತೊಡಗಿರುವ ನೋಂದಾಯಿತ ಕಾರ್ಮಿಕರ ಇಬ್ಬರು ಮಕ್ಕಳಿಗೆ

15. **ತಾಯಿ ಮಗು ಸಹಾಯ ಹಸ್ತ:** ಮಹಿಳಾ ಫಲಾನುಭವಿಯು ಮಗುವಿಗೆ ಜನ್ಮ ನೀಡಿದ ಸಂದರ್ಭದಲ್ಲಿ ಆಕೆಯ ಮಗುವಿನ ಶಾಲಾ ಪೂರ್ವ ಶಿಕ್ಷಣ ಮತ್ತು ಪೌಷ್ಠಿಕತೆಗಾಗಿ ಮಗುವಿಗೆ ಮೂರು ವರ್ಷಗಳು ತುಂಬುವವರೆಗೆ ವಾರ್ಷಿಕ ರೂ.6,000/–ಗಳ ಸಹಾಯಧನ.

